KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮೇ ೨೭, ೨೦೧೦ (ಜ್ಯೇಷ್ಠ ೬, ಶಕ ವರ್ಷ ೧೯೩೨) | ಸಂಚಿಕೆ ೨೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ವಸತಿ ಸಚಿವಾಲಯ**

**ವಿಷಯ :** ಬಾಗಲಕೋಟೆ ಜಿಲ್ಲೆ, ಮಹಾಲಿಂಗಪೂರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ. /ವಇ/42/ಹೆಚ್ಎಎಂ/1999, ದಿನಾಂಕ 10–05–2000.
2. ಸರ್ಕಾರದ ಆದೇಶ ಸಂ.ವಇ/18/ಹೆಚ್ಎಎಸ್/2008, ದಿನಾಂಕ 16–09–2009

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಮತ್ತು ಮೇಲೆ (2)ರಲ್ಲಿ ಓದಲಾದ ಆದೇಶವನ್ನು ಮುಂದುವರೆಸುತ್ತಾ, ಬಾಗಲಕೋಟೆ ಜಿಲ್ಲೆ, ಮಹಾಲಿಂಗಪೂರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 15 ಹೆಚ್ಎಎಸ್ 2010, ಬೆಂಗಳೂರು, ದಿನಾಂಕ:09–03–2010**

ಬಾಗಲಕೋಟೆ ಜಿಲ್ಲೆ, ಮಹಾಲಿಂಗಪೂರ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್‌ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1. | ಶ್ರೀ ಅರ್ಜುನ ರಾಮಚಂದ್ರ ಮೋಪಗಾರ, ಮಹಾಲಿಂಗಪೂರ | ಸಾಮಾನ್ಯ |
| 2. | ಶ್ರೀಮತಿ ಜೈತುನಭೀ ಹುಸೇನಸಾಬ, ಉಕಲಿ | ಅಲ್ಪಸಂಖ್ಯಾತರು (ಮಹಿಳೆ) |
| 3. | ಶ್ರೀ ಚನ್ನಗಿರಿ ಹಣಮಂತ ಬಂಡಿವಡ್ಡರ, ಮಹಾಲಿಂಗಪೂರ | ಪರಿಶಿಷ್ಟ ಜಾತಿ |
| 4. | ಶ್ರೀ ಚನ್ನಪ್ಪ ಕಲ್ಲಪ್ಪ ಮಾಳಿ, (ಬಾಳಿಕಾಯಿ), ಮಹಾಲಿಂಗಪೂರ | ಹಿಂದುಳಿದ ವರ್ಗ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.807

**ಕೆ.ಆರ್. ವಲ್ಲೂರ**
ಪಿಠಾಧಿಕಾರಿ–2 ವಸತಿ ಇಲಾಖೆ

**ವಸತಿ ಸಚಿವಾಲಯ**

**ವಿಷಯ :** ಕೇಂದ್ರ ಪುರಸ್ಕೃತ ನರ್ಮ್ ಯೋಜನೆಯ ಐಹೆಚ್‌ಎಸ್‌ಡಿಪಿ ಯೋಜನೆ – ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:** 1. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರಗಳ ಸಂಖ್ಯೆ: ಕಕೊನಿಮ/ಲೆ.ಪ.ಶಾ:ನರ್ಮ್/ಐಹೆಚ್‌ಎಸ್‌ಡಿಪಿ/2009-10, ದಿ: 21-11-2009 ಮತ್ತು 30-11-2009.

2. ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ:ಆಇ 5 ವೆಚ್ಚ-9/10, ದಿನಾಂಕ:23-02-2010

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಆಯುಕ್ತರು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ ಯೋಜನೆಯ 1 ಮತ್ತು 2ನೇ ಹಂತದಲ್ಲಿ ಮನೆಗಳ ನಿರ್ಮಾಣ ಹಾಗೂ ಮೂಲಭೂತ ಸೌಲಭ್ಯಗಳ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಮವಾಗಿ ಮೊದಲನೇ ಹಂತಕ್ಕೆ ಅವಶ್ಯವಿರುವ ರೂ. 2366.97 ಲಕ್ಷ (IEC & O&M ಹೊರತುಪಡಿಸಿ), 2ನೇ ಹಂತಕ್ಕೆ ರೂ. 2395.14 ಲಕ್ಷ (IEC & O&M ಸೇರಿ) ರಾಜ್ಯದ ಪಾಲಿನ ಅನುದಾನ ಬಿಡುಗಡೆ ಮಾಡಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆರ್ಥಿಕ ಇಲಾಖೆಯು ತನ್ನ ಹಿಂಬರಹದಲ್ಲಿ ಐಹೆಚ್‌ಎಸ್‌ಡಿಪಿ ಯೋಜನೆಯಡಿ ಮೊದಲನೇ ಹಂತದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಅನುದಾನದ ಬಾಬ್ತು 2009-10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2217-04-191-2-03-106 (ಪಿ) ರಡಿ ಲಭ್ಯವಿರುವ ರೂ. 51.734 ಲಕ್ಷಗಳ (ಐವತ್ತೊಂದು ಲಕ್ಷ ಎಪ್ಪತ್ತ ಮೂರು ಸಾವಿರದ ನಾಲ್ಕುನೂರು ಮಾತ್ರ) ಅನುದಾನವನ್ನು ಬಿಡುಗಡೆ ಮಾಡುವುದಕ್ಕೆ ಆರ್ಥಿಕ ಇಲಾಖೆಯು ಸಹಮತಿ ನೀಡಿರುತ್ತದೆ.

ಸರ್ಕಾರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 12 ಕೊಮಂಲೆ 2009, ಬೆಂಗಳೂರು, ದಿನಾಂಕ:01-03-2010**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಸಮಗ್ರ ವಸತಿ ಮತ್ತು ಕೊಳಚೆ ಪ್ರದೇಶ ಅಭಿವೃದ್ಧಿ (ಐಹೆಚ್‌ಎಸ್‌ಡಿಪಿ) ಯೋಜನೆಯಡಿ ಮೊದಲನೇ ಹಂತದ ಕಾಮಗಾರಿಗೆ ರಾಜ್ಯ ಸರ್ಕಾರದ ಪಾಲಿನ ಅನುದಾನದ ಬಾಬ್ತು 2009-10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2217-04-191-2-03-106 (ಪಿ) ರಡಿ ಲಭ್ಯವಿರುವ ರೂ. 51,73,400/- (ಐವತ್ತೊಂದು ಲಕ್ಷ ಎಪ್ಪತ್ತ ಮೂರು ಸಾವಿರದ ನಾಲ್ಕುನೂರು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಈ ಹಿಂದಿನ ಆದೇಶಗಳಲ್ಲಿ ನೀಡಲಾಗಿರುವ ಸೂಚನೆ/ಷರತ್ತುಗಳು ಅಂದರೆ ಫಲಾನುಭವಿಗಳ ವಂತಿಗೆಯನ್ನು ಕಡ್ಡಾಯ ವಸೂಲಿ ಮಾಡುವುದು, ಕೇಂದ್ರ ಹಾಗೂ ರಾಜ್ಯದ ಪಾಲಿನ ಅನುದಾನದ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಕಾಲದಲ್ಲಿ ಸಲ್ಲಿಸುವುದು ಇತ್ಯಾದಿಗಳನ್ನು ಅವಶ್ಯಕವಾಗಿ ಪಾಲಿಸತಕ್ಕದ್ದು.

ಈ ಮೊತ್ತವನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಯು, ವಸತಿ ಇಲಾಖೆಯ ಉಪ ಕಾರ್ಯದರ್ಶಿಯವರ ಮೇಲು ಸಹಿ ಪಡೆದ ನಂತರ ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: FD 05 ವೆಚ್ಚ-9/10, ದಿನಾಂಕ:23-02-2010ರ ಸೂಚನೆಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.812

**ಜಿ.ಆರ್. ನಾಗರಾಜ**

ಪೀಠಾಧಿಕಾರಿ-4, ವಸತಿ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ನಾಗರಾಜಪ್ಪ ಹೊನ್ನಾಳ, ಹಿಂದಿನ ತಹಶೀಲ್ದಾರ್, ಬ್ಯಾಡಗಿ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ

**ಓದಲಾಗಿದೆ:** 1. ಆಯುಕ್ತರು, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ, ಬೆಂಗಳೂರು ಇವರ ಪತ್ರದ ಸಂಖ್ಯೆ: ಸಿಎಫ್‌ಎಸ್/ಇಎಸ್‌ಟಿ(2)24/2003-04, ದಿನಾಂಕ:12-01-2007

**2.** ಕಾರಣ ಕೇಳುವ ನೋಟೀಸ್ ಸಂ: ಆರ್‌ಡಿ 14 ಎಡಿಇ 2007, ದಿನಾಂಕ:31-05-2007.

**3.** ಶ್ರೀ ನಾಗರಾಜಪ್ಪ ಹೊನ್ನಾಳ್ ಇವರ ಲಿಖಿತ ಸಮಜಾಯಿಷಿ ದಿನಾಂಕ: 22-06-2009.

**4.** ಸರ್ಕಾರದ ಆದೇಶ ಸಂ: ಅರ್‌ಡಿ 14 ಎಡಿಇ 2007, ದಿ: 03-11-2007.

**5.** ಶ್ರೀ ನಾಗರಾಜಪ್ಪ ಹೊನ್ನಾಳ್ ಇವರ ಮನವಿ ದಿನಾಂಕ:30-11-2009.

**ಪ್ರಸ್ತಾವನೆ :**

ಶ್ರೀ ನಾಗರಾಜಪ್ಪ ಹೊನ್ನಾಳ್ ಹಿಂದಿನ ತಹಶೀಲ್ದಾರ್, ತಾಲ್ಲೂಕು ಕಛೇರಿ, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ ಇವರು ಅಂತ್ಯೋದಯ ಕಾರ್ಡುಗಳ ವಿತರಣೆಯನ್ನು ಮಾಡುವಾಗ ಅನರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಿದ್ದು, ಕೇವಲ ಆಹಾರ ನಿರೀಕ್ಷಕರ ವರದಿಯ ಆಧಾರದ ಮೇಲೆ ವರದಿ ಸಲ್ಲಿಸಿರುವುದು ಹಾಗೂ ಅಂತ್ಯೋದಯ ಕಾರ್ಡುಗಳ

ಫಲಾನುಭವಿಗಳು ಕಡಿಮೆ ಆದ ನಂತರವೂ ಆಹಾರ ಧಾನ್ಯಗಳನ್ನು ಬಿಡುಗಡೆ ಮಾಡಿರುವುದು ಕಾನೂನು ಬಾಹಿರವಾಗಿದ್ದು ಈ ರೀತಿಯ ಕರ್ತವ್ಯ ಲೋಪ ಎಸಗಿರುವ ಕಾರಣ, ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11ರಡಿಯಲ್ಲಿ ಮೇಲ್ಕಂಡ ಪತ್ರದಲ್ಲಿ ಪ್ರಸ್ತಾಪಿಸಿರುವ ಆರೋಪ ಪಟ್ಟಿಗಳನ್ನು ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪಿತ ಅಧಿಕಾರಿಗೆ ಜಾರಿ ಮಾಡಿ, ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ.(2)ರಲ್ಲಿ ಓದಲಾದ ದಿನಾಂಕ:31–05–2007ರ ನೋಟೀಸ್ ಮೂಲಕ ತಿಳುವಳಿಕೆ ಪತ್ರ ನೀಡಲಾಯಿತು. ಕ್ರ.ಸಂ.(3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ನಾಗರಾಜಪ್ಪ ಹೊನ್ನಾಳ್, ತಹಶೀಲ್ದಾರ್ ಇವರು ತಮ್ಮ ವಿರುದ್ಧ ಆರೋಪಗಳನ್ನು ಅಲ್ಲಗಳೆದಿರುತ್ತಾರೆ ಹಾಗೂ ತಮ್ಮ ವಿರುದ್ಧ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ. ಈ ಹಿನ್ನಲೆಯಲ್ಲಿ ಆಪಾದಿತ ಅಧಿಕಾರಿ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಈ ಬಗ್ಗೆ ಇಲಾಖಾ ವಿಚಾರಣೆಯನ್ನು ಜರುಗಿಸಲು ನಿರ್ಧರಿಸಿ ಶ್ರೀ ಟಿ.ಎಸ್. ಪಾಲನೇತ್ರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಹಾವೇರಿ ಜಿಲ್ಲಾಧಿಕಾರಿಗಳ ಕೇಂದ್ರಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ಕ್ರ.ಸಂ.(4)ರಲ್ಲಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರ.ಸಂ.(5)ರಲ್ಲಿ ಶ್ರೀ ನಾಗರಾಜಪ್ಪ ಹೊನ್ನಾಳ್, ತಹಶೀಲ್ದಾರ್ ಇವರು ಶ್ರೀ ಟಿ.ಎಸ್. ಪಾಲನೇತ್ರಾ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ರವರು ನಿಧನ ಹೊಂದಿದ್ದಾರೆಂದು ಬೇರೆ ವಿಚಾರಣಾಧಿಕಾರಿಯವರನ್ನು ನೇಮಿಸಿ ವಿಚಾರಣೆ ನಡೆಸುವಂತೆ ಕೋರಿದ್ದಾರೆ. ಆದುದರಿಂದ ವಿಚಾರಣಾಧಿಕಾರಿ ಬದಲಾವಣೆ ಕೋರಿಕೆಯನ್ನು ಸರ್ಕಾರವು ಪರಿಗಣಿಸಿ ದಿನಾಂಕ:03–11–2007ರ ಸರ್ಕಾರದ ಆದೇಶ ಸಂ: ಆರ್‌ಡಿ 14 ಎಡಿಇ 2007ನ್ನು ಮಾರ್ಪಡಿಸಿ, ಶ್ರೀ ಟಿ.ಎಸ್. ಪಾಲನೇತ್ರಾ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಇವರ ಬದಲಾಗಿ, ಶ್ರೀ ಫ.ಸಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ತಹಶೀಲ್ದಾರ್, ಬ್ಯಾಡಗಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ನಿರ್ಧರಿಸಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 14 ಎಡಿಇ 2007, ಬೆಂಗಳೂರು, ದಿನಾಂಕ: 19–03–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನಾಗರಾಜಪ್ಪ ಹೊನ್ನಾಳ್, ಹಿಂದಿನ ತಹಶೀಲ್ದಾರ್, ಬ್ಯಾಡಗಿ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಶ್ರೀ ಫ.ಸಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಾಧಿಕಾರಿಯನ್ನಾಗಿ ಹಾಗೂ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ತಹಶೀಲ್ದಾರ್ ಬ್ಯಾಡಗಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಹಾವೇರಿ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿ ಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ನೀಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ ಹಾಗೂ ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸರ್ಕಾರಿ ಆದೇಶ ಸಂ:ಸಿಆಸುಇ 22 ಸೇಇವಿ 2007, ದಿನಾಂಕ: 11–04–2008ರನ್ವಯ ರೂ. 8,000/– (ಎಂಟು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ರೂ. 1,500/– (ಒಂದು ಸಾವಿರದ ಐದು ನೂರು ರೂಪಾಯಿಗಳು ಮಾತ್ರ) ಗಳ ವಾಹನ ಭತ್ಯೆ (ಕನ್ವೆಯನ್ಸ್ ಅಲೋಯನ್ಸ್) ಒಟ್ಟು ರೂ.9,500/– (ಒಟ್ಟು ಒಂಬತ್ತು ಸಾವಿರದ ಐದುನೂರು ರೂಪಾಯಿಗಳು ಮಾತ್ರ) ಅನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ, ಹಾವೇರಿ ಇವರು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಾವಳಿಗಳ ನಿಯಮ 11 ಮತ್ತು 11(ಎ)ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು ಎರಡು ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.813

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಬದರೀನಾಥ್, ಹಿಂದಿನ ತಹಶೀಲ್ದಾರ್, ನಂಜನಗೂಡು ತಾಲ್ಲೂಕು, ಪ್ರಸ್ತುತ ನಿವೃತ್ತ ಇವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ಆದೇಶ ಕುರಿತು.

**ಓದಲಾಗಿದೆ:**
1. ಮೈಸೂರು ಜಿಲ್ಲಾಧಿಕಾರಿಯವರ ದಿನಾಂಕ:21–01–2000ರ ಪತ್ರ ಸಂ:ಇಎಸ್‌ಟಿ(2):ಸಿಆರ್:3:98–99
2. ದಿನಾಂಕ:12–10–2001ರ ತಿಳುವಳಿಕೆ ಪತ್ರ ಸಂ:ಆರ್‌ಡಿ 21 ಎಡಿಇ 2000.
3. ಶ್ರೀ ಬದರೀನಾಥ್‌ರವರ ದಿನಾಂಕ: 23–10–2001ರ ಲಿಖಿತ ಹೇಳಿಕೆ
4. ಸರ್ಕಾರದ ಆದೇಶ ಸಂ: ಕಂಇ 21 ಎಡಿಇ 2000, ದಿ: 23–10–2002.
5. ಜಿಲ್ಲಾಧಿಕಾರಿಗಳು, ಮಂಡ್ಯ ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ:12–04–2006.
6. ಎರಡನೇ ಕಾರಣ ಕೇಳುವ ನೋಟೀಸು ದಿನಾಂಕ: 06–11–2006.
7. ಶ್ರೀ ಬದರೀನಾಥ್, ನಿವೃತ್ತ ತಹಶೀಲ್ದಾರ್ ಇವರ ಲಿಖಿತ ಸಮಜಾಯಿಷಿ ದಿನಾಂಕ: 18–11–2006.
8. ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಸಂ: ಪಿಎಸ್‌ಸಿ 173 ಸಿಎನ್‌ಎಸ್ 2008, ದಿನಾಂಕ:17–06–2009.

**ಪ್ರಸ್ತಾವನೆ :**

ಶ್ರೀ ಬದರೀನಾಥ್ ರವರು ಹಿಂದೆ ನಂಜನಗೂಡು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸದರಿ ತಾಲ್ಲೂಕಿನ ಛತ್ರ ಹೋಬಳಿ, ಕುರಹಟ್ಟಿ ಗ್ರಾಮದ ಸ.ನಂ.1 ರಲ್ಲಿ 74.24 ಎಕರೆ–ಗುಂಟೆ ಜಮೀನನ್ನು ಶ್ರೀ ಎ.ತಿಲಕರಾಂ ಎಂಬುವವರು 1961ರ ಕರ್ನಾಟಕ ಭೂ ಸುಧಾರಣಾ ಕಾಯಿದೆ ಕಲಂ 79–ಎ ಮತ್ತು ಬಿ ಯನ್ನು ಉಲ್ಲಂಘನೆ ಮಾಡಿ ಖರೀದಿಸಿದ್ದರೂ ಸಹ ಖರೀದಿದಾರರಿಗೆ ಖಾತೆ ಮಾಡಲು ಆದೇಶ ನೀಡಿ ಅಧಿಕಾರ ದುರುಪಯೋಗ ಮಾಡಿರುತ್ತಾರೆಂದು ಸದರಿ ತಾಲ್ಲೂಕಿನ ದೊಡ್ಡ ಕವಲಂದೆ ಹೋಬಳಿಯಲ್ಲಿ ಭೂ ಸುಧಾರಣಾ ಕಾಯಿದೆ ಅನ್ವಯ ಅದಿಭೋಗದಾರರನ್ನಾಗಿ ನೋಂದಾಯಿಸಿರುವ ಜಮೀನಿಗೆ ಹಿಡುವಳಿ ಜಮೀನೆಂದು ಭೂ ವಿಜ್ಞಾನ ಇಲಾಖೆಗೆ ವರದಿ ಮಾಡಿರುವುದಾಗಿ, ನಂಜನಗೂಡು ಕಸಬಾ ಸ.ನಂ. 1325ರ ಚಕ್ರ ಇನಾಂ ಜಮೀನನ್ನು ದಿನಾಂಕ:04–11–1997ರ ಸರ್ಕಾರಿ ಸುತ್ತೋಲೆ ಅನ್ವಯ ತಹಶೀಲ್ದಾರರಿಗೆ ಅಧಿಕಾರವಿಲ್ಲದಿದ್ದರೂ ಸಹ ಪುನರ್ ಮಂಜೂರಾತಿ ನೀಡಿರುವುದಾಗಿ, ಸದರಿ ತಾಲ್ಲೂಕಿನ ಹಡೆತಲೆ ಗ್ರಾಮದ 6–00 ಎಕರೆ ಭಾಗಾಯಿತು ಜಮೀನಿಗೆ ಗ್ರಾಮ ಲೆಕ್ಕಿಗರು ಖುಷ್ಕಿ ಜಮೀನೆಂದು ಆರ್.ಟಿ.ಸಿ. ನೀಡಿದ ವಿಚಾರದಲ್ಲಿ ಅವರ ವಿರುದ್ಧ ಶಿಸ್ತಿನ ಕ್ರಮ ಬಾಕಿಯಿದ್ದರೂ ಸಹ ಖರೀದಿದಾರರ ಹೆಸರಿಗೆ ಖಾತೆ ಮಾಡಲು ಶ್ರೀ ಬದರೀನಾಥ್ ಆದೇಶ ಹೊರಡಿಸಿ ನೋಂದಣಿ ಶುಲ್ಕದ ಮೂಲಕ ಸರ್ಕಾರಕ್ಕೆ ಅಧಿಕ ನಷ್ಟ ಉಂಟಾಗಲು ಕಾರಣರಾಗಿರುವುದಾಗಿ, ಸದರಿ ತಾಲ್ಲೂಕಿನ ದೊಡ್ಡ ಕವಲಂದೆ ಹೋಬಳಿ ಹರಗನಪುರ ಗ್ರಾಮದ ಸ.ನಂ. 119ರ ಸರ್ಕಾರಿ ಜಮೀನಿಗೆ ಸೇರಿದಂತೆ ಒಂದು ಜನಾಂಗದ ಸ್ಮಶಾನಕ್ಕಾಗಿ ಇನ್ನು ಒಂದು ಜನಾಂಗದಿಂದ ತಪ್ಪು ಮಾಹಿತಿ ನೀಡಿ ಅನಾವಶ್ಯಕ ಗಲಭೆಗೆ ಪ್ರಚೋದನೆ ನೀಡುವಲ್ಲಿ ಕಾರಣರಾಗಿರುತ್ತಾರೆಂದು, ನಂಜನಗೂಡು ಪುರಸಭೆ ಅಧ್ಯಕ್ಷರು: ಉಪಾಧ್ಯಕ್ಷರ ಚುನಾವಣೆ ಸಂಬಂಧ ದಿನಾಂಕ 9–9–98ರಂದು ನಡೆದ ಸಭೆಯಲ್ಲಿ ಜವಾಬ್ದಾರಿಯುತ ಕೆಲಸ ನಿರ್ವಹಿಸದೇ ಚುನಾವಣೆ ಮುಂದೂಡಿ ಶಾಂತಿಭಂಗ ಉಂಟಾಗಲು ಕಾರಣರಾಗಿರುತ್ತಾರೆಂದು, ಸದರಿ ತಾಲ್ಲೂಕಿನ ಉಪಾರಹುಂಡಿ ಗ್ರಾಮದವರಿಗೆ ದೇವಸ್ಥಾನ ಕಟ್ಟುವ ಬಗ್ಗೆ ದಿನಾಂಕ:13–11–1998ರಂದು ಭೂ ಸ್ವಾಧೀನಪಡಿಸಿಕೊಳ್ಳಲು ಶಿಫಾರಸ್ಸು ಮಾಡಿ ಪುನ: ದಿನಾಂಕ: 20–11–1998ರಂದು ದೇವಸ್ಥಾನ ಕಟ್ಟಬಾರದೆಂದು ಆದೇಶಿಸಿ ಗ್ರಾಮದಲ್ಲಿ ಶಾಂತಿಭಂಗವನ್ನುಂಟು ಮಾಡಲು ಕಾರಣರಾಗಿರುತ್ತಾರೆಂದು, ಸದರಿ ತಾಲ್ಲೂಕಿಗೆ ಸಂಬಂಧಿಸಿದ 1961ರ ಇನಾಂ ರದ್ದಿಯಾಗಿ ಕಾಯಿದೆಯಂತೆ ಚಕ್ರ ಇನಾಂ ಜಮೀನುಗಳನ್ನು ಗುರುತಿಸಿ, ಚಕ್ರ ವಂಶಸ್ಥರಿಗೆ ಮರು ಮಂಜೂರಾತಿಗೆ ಬಾಕಿ ಇಲ್ಲವೆಂದು ದಿನಾಂಕ:13–01–1999 ರಂದು ವರದಿ ಮಾಡಿ ನಂತರ ದಿನಾಂಕ: 27–1–1999ರಂದು ಸದರಿ ಜಮೀನುಗಳ ಮರು ಮಂಜೂರಾತಿಗೆ ಮತ್ತೆ ಕಡತ ಸಲ್ಲಿಸಿ, ಮೇಲಾಧಿಕಾರಿಗಳಿಗೆ ತಪ್ಪು ವರದಿ ನೀಡಿರುತ್ತಾರೆಂದು ಹಾಗೂ ಮೈಸೂರು ಉಪ ವಿಭಾಗಾಧಿಕಾರಿಗಳು ದಿನಾಂಕ:10–03–1999 ರಂದು ನಂಜನಗೂಡು ತಾಲ್ಲೂಕು ಪ್ರವಾಸ ಕಾರ್ಯಕ್ರಮದ ಬಗ್ಗೆ ತಿಳಿಸಿದ್ದರೂ ಸಹ ಸದರಿ ದಿನಾಂಕದಂದು ಶ್ರೀ ಬದರೀನಾಥ್‌ರವರು ಸೇವೆಗೆ ಗೈರು ಹಾಜರಾಗಿ ಸರ್ಕಾರಿ ಹಾಗೂ ಸಾರ್ವಜನಿಕ ಕಾರ್ಯಗಳಿಗೆ ಅಡ್ಡಿಯುಂಟುಮಾಡಿರುತ್ತಾರೆಂದು, ಮೇಲೆ ಕ್ರ.ಸಂ.(1)ರಲ್ಲಿ ಓದಲಾದ ದಿನಾಂಕ:21–1–2000 ಪತ್ರದಲ್ಲಿ ಮೈಸೂರು ಜಿಲ್ಲಾಧಿಕಾರಿಯವರು ವರದಿ ಮಾಡಿ ಶ್ರೀ ಬದರೀನಾಥ್‌ರವರ ವಿರುದ್ಧ ಶಿಸ್ತು ಕ್ರಮ ಜರಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರನ್ವಯ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ದೋಷಾರೋಪಣಾ ಪಟ್ಟಿಗಳನ್ನು ಇವರಿಗೆ ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ:12–10–2001ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಇದಕ್ಕೆ ಉತ್ತರವಾಗಿ ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ದಿನಾಂಕ:23–10–2001ರ ಲಿಖಿತ ಸಮಜಾಯಿಷಿಯನ್ನು ಸಲ್ಲಿಸಿದ್ದು, ಸದರಿ ಸಮಜಾಯಿಷಿಯನ್ನು ಪರಿಶೀಲಿಸಲಾಗಿ, ಸದರಿ ಆಪಾದಿತರ ವಿರುದ್ಧದ ಆರೋಪಗಳು ಒಪ್ಪಿಕೊಂಡಿಲ್ಲವಾದ್ದರಿಂದ, ಇವರ ವಿರುದ್ಧದ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಓದಲಾದ ಕ್ರ.ಸಂ.(4) ದಿನಾಂಕ: 23–10–2002ರಲ್ಲಿ ಜಿಲ್ಲಾಧಿಕಾರಿಗಳು, ಮಂಡ್ಯ ಜಿಲ್ಲೆ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಕೇಂದ್ರಸ್ಥಾನಿಕ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಮಂಡ್ಯ ಇವರನ್ನು

ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿತ್ತು. ಅದರಂತೆ, ಜಿಲ್ಲಾಧಿಕಾರಿಗಳು ಮಂಡ್ಯ ಜಿಲ್ಲೆ ಹಾಗೂ ವಿಚಾರಣಾಧಿಕಾರಿಗಳು ಇವರು ಮೇಲೆ ಓದಲಾದ ಕ್ರ.ಸಂ.(5)ದಿನಾಂಕ:12–04–2006ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ, ಆಪಾದಿತರಾದ ಶ್ರೀ ಬದರೀನಾಥ್, ಹಿಂದಿನ ತಹಶೀಲ್ದಾರ್, ನಂಜನಗೂಡು ತಾಲ್ಲೂಕು (ಪ್ರಸ್ತುತ ನಿವೃತ್ತ) ಇವರ ವಿರುದ್ಧದ ಆಪಾದನೆಗಳು ಸಾಬೀತಾಗಿರುತ್ತದೆ ಎಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಅದರಂತೆ, ವಿಚಾರಣಾ ವರದಿಯೊಂದಿಗೆ ಮೇಲೆ ಓದಲಾದ ಕ್ರ.ಸಂ.(6) ದಿನಾಂಕ: 06–11–2006ರಲ್ಲಿ ಶ್ರೀ ಬದರೀನಾಥ್, ಇವರಿಗೆ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಶ್ರೀ ಬದರೀನಾಥ್, ನಿವೃತ್ತ ತಹಶೀಲ್ದಾರ್ ಇವರು ಲಿಖಿತ ಸಮಜಾಯಿಷಿ ಸಲ್ಲಿಸಿ, ತಾವು ನಿಯಮಾನುಸಾರ ಕ್ರಮ ಕೈಗೊಂಡಿದ್ದು, ಯಾವುದೇ ನಿಯಮಗಳ ಉಲ್ಲಂಘನೆ ಮಾಡಿಲ್ಲವೆಂದು ಹೇಳಿಕೆ ನೀಡಿ, ತಮ್ಮ ವಿರುದ್ಧದ ಆಪಾದನೆಗಳಿಂದ ಮುಕ್ತಗೊಳಿಸುವಂತೆ ಕೋರಿರುತ್ತಾರೆ. ಅದರಂತೆ, ಸರ್ಕಾರವು ವಿಚಾರಣೆ ವರದಿ ಹಾಗೂ ಆಪಾದಿತರ ಹೇಳಿಕೆಯನ್ನು ಪರಿಶೀಲಿಸಲಾಗಿ, ಆಪಾದಿತರು ನಿಯಮಗಳ ಉಲ್ಲಂಘನೆ ಮಾಡಿರುವುದು ವಿಚಾರಣೆಯಲ್ಲಿ ದಾಖಲೆ ಹಾಗೂ ಸಾಕ್ಷಿಗಳ ಸಮೇತ ಸಾಬೀತಾಗಿರುವುದರಿಂದ, ಸರ್ಕಾರವು ಶ್ರೀ ಬದರೀನಾಥ್, ನಿವೃತ್ತ ತಹಶೀಲ್ದಾರ್ ಇವರ ನಿವೃತ್ತಿ ವೇತನದಿಂದ ಶೇಕಡ 10% ರಷ್ಟು ನಿವೃತ್ತಿ ವೇತನವನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ನಿರ್ಧರಿಸಲಾಗಿರುತ್ತದೆ. ಈ ಬಗ್ಗೆ ಮೇಲೆ ಓದಲಾದ ಕ್ರ.ಸಂ.(8) ದಿನಾಂಕ: 17–06–2009ರಲ್ಲಿ ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗವು ಸಹಮತಿಯನ್ನು ನೀಡಿರುತ್ತದೆ. ಆದ್ದರಿಂದ ಶ್ರೀ ಬದರೀನಾಥ್, ನಿವೃತ್ತ ತಹಶೀಲ್ದಾರ್ ಇವರಿಗೆ ಕೆಸಿಎಸ್ಆರ್ ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಲ್ಲಿ ಶೇಕಡ 10% ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 21 ಎಡಿಇ 2000, ಬೆಂಗಳೂರು, ದಿನಾಂಕ: 01–10–2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಬದರೀನಾಥ್, ಹಿಂದಿನ ತಹಶೀಲ್ದಾರ್, ನಂಜನಗೂಡು ತಾಲ್ಲೂಕು ಪ್ರಸ್ತುತ ನಿವೃತ್ತ ಅವರ ವಿರುದ್ಧ ವಿಚಾರಣೆಯಲ್ಲಿ ಆಪಾದನೆಗಳು ಸಾಬೀತಾಗಿದ್ದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ನಿಯಮ 214ರಡಿಯಲ್ಲಿ ಅವರ ನಿವೃತ್ತಿ ವೇತನದಲ್ಲಿ ಶೇಕಡ 10ರಷ್ಟನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.814

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್.ಪಿ. ಮಹೇಶ್, ಮಾಜಿ ಪಿ.ಸಿ. ಪೊಲೀಸ್ ನಿಯಂತ್ರಣ ಕೋಣೆ, ಪೊಲೀಸ್ ಆಯುಕ್ತರು ರವರ ಕಛೇರಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣೆ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರ ಹಾಗೂ ಉಪ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು ನಗರ ಇವರ ಆದೇಶ ಸಂಖ್ಯೆ: 70/ಡಿಇ1/ಆರ್62007 ದಿ:24–07–2009.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು, ಇವರ ಆದೇಶ ಸಂಖ್ಯೆ: 24/ಅಪೀಲು–1/2009, ದಿನಾಂಕ:24–09–2009
3. ಅರ್ಜಿದಾರರ ಪರಿಷ್ಕರಣೆ ಮೇಲ್ಮನವಿ ಅರ್ಜಿ ದಿ:17–10–2009.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)48/2009–10, ದಿನಾಂಕ:26–11–2009.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 181 ಸಿಎನ್ಎಸ್ 09, ದಿನಾಂಕ:18–02–2010

**ಪ್ರಸ್ತಾವನೆ :**

ಶ್ರೀ ಎಸ್.ಪಿ. ಮಹೇಶ್, ಇವರು ಈ ಹಿಂದೆ ವಿದ್ಯಾರಣ್ಯಪುರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಇವರನ್ನು ಬೆಂಗಳೂರಿನ ಅಂತರಾಷ್ಟ್ರೀಯ ವಿಮಾನ ನಿಲ್ದಾಣದಲ್ಲಿನ ಇಮಿಗ್ರೇಷನ್ ವಿಭಾಗಕ್ಕೆ ಓಓಡಿಯ ಆಧಾರದ ಮೇಲೆ ನಿಯೋಜಿಸಲಾಗಿತ್ತು ಆ ಸಂದರ್ಭದಲ್ಲಿ ಕರ್ತವ್ಯದಲ್ಲಿ ನಿರ್ಲಕ್ಷ್ಯತನ, ಅಧಿಕಾರ ದುರುಪಯೋಗ ಹಾಗೂ ಬೇಜವಾಬ್ದಾರಿತನದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿಗಳ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

"ಶ್ರೀ ಎಸ್.ಪಿ. ಮಹೇಶ್, ಪಿ.ಸಿ.–9419, ವಿದ್ಯಾರಣ್ಯಪುರ ಪೊಲೀಸ್ ಠಾಣೆ, ಎರವಲು ಸೇವೆಯ ಮೇರೆಗೆ ಇಮಿಗ್ರೇಷನ್ ವಿಭಾಗ, ಬೆಂಗಳೂರು ಆದ ನಿಮ್ಮನ್ನು ದಿ:05–12–2007 ರಂದು ರಾತ್ರಿ 8–00 ಗಂಟೆಯಿಂದ ದಿನಾಂಕ:06–12–2007ರ ಬೆಳಿಗ್ಗೆ 8–00 ಗಂಟೆಯವರೆಗೆ ಬೆಂಗಳೂರು ನಗರ ಅಂತರ ರಾಷ್ಟ್ರೀಯ ವಿಮಾನ ನಿಲ್ದಾಣ ಇಮಿಗ್ರೇಷನ್ ನಿರ್ಗಮನ ವಿಭಾಗದಲ್ಲಿ ಪ್ರಯಾಣಿಕರ ಇಮಿಗ್ರೇಷನ್ ಕ್ಲಿಯರೆನ್ಸ್ ಬಗ್ಗೆ ಕೌಂಟರ್ ನಂ–6ಕ್ಕೆ ನೇಮಕ ಮಾಡಿ ಸೀಲ್ ನಂ–006ನ್ನು ನಿಮ್ಮಿಂದ ಸ್ವೀಕೃತ ಪಡೆದು ನೀಡಿದ್ದು, ನೀವು ಇಮಿಗ್ರೇಷನ್ ಕ್ಲಿಯರೆನ್ಸ್ ನೀಡುವ ಕಾರ್ಯದಲ್ಲಿ ಬ್ಯೂರೋ ಆಫ್ ಇಮಿಗ್ರೇಷನ್ ಅಧಿಕಾರಿಗಳು ಪಾಸ್‌ಪೋರ್ಟ್ ನೈಜತೆ ಹಾಗೂ ಅನುಮಾನಾಸ್ಪದ ಪಾಸ್‌ಪೋರ್ಟ್ ಹಾಗೂ ಅನುಮಾನಾಸ್ಪದ ಪಾಸ್ ಪೋರ್ಟ್‌ಗಳನ್ನು ಪತ್ತೆ ಮಾಡುವ ಬಗ್ಗೆ ತರಬೇತಿಯನ್ನು ಪಡೆದಿದ್ದು, ಪ್ರಯಾಣಿಕರು ಹಾಜರುಪಡಿಸುವ ಪಾಸ್‌ಪೋರ್ಟ್‌ನ್ನು ಇಮಿಗ್ರೇಷನ್ ವಿಭಾಗದಲ್ಲಿ ಅಳವಡಿಸಿರುವ ಪಾಸ್‌ಪೋರ್ಟ್ ರೀಡಿಂಗ್‌ನಲ್ಲಿ ಸ್ವೈಪ್ ಮಾಡಿ ಪರಿಶೀಲಿಸಿ ನಂತರ ನಿರ್ಗಮನ ಎಂಬಾರ್‌ಕೇಷನ್ ಕಾರ್ಡ್‌ನಲ್ಲಿನ ವಿವರಗಳು ಹಾಗೂ ಪ್ರಯಾಣಿಕರ ಸಹಿಯನ್ನು ಪರಿಶೀಲಿಸಿ ಎಲ್ಲವೂ ಸರಿ ಇದ್ದಲ್ಲಿ ಎಂಬಾರ್‌ಕೇಷನ್ ಕಾರ್ಡ್, ಬೋರ್ಡಿಂಗ್ ಪಾಸ್ ಹಾಗೂ ವಿಸಾ ದಾಖಲಾತಿಗಳಲ್ಲಿ ಇಮಿಗ್ರೇಷನ್ ವಿಭಾಗದಿಂದ ನಿಮಗೆ ನೀಡಿರುವ ಸೀಲ್ ನಂ. 006ನ್ನು ಒತ್ತಿ ಎಂಬಾರ್‌ಕೇಷನ್ ಕಾರ್ಡ್‌ನಲ್ಲಿ ಸಹಿ ಮಾಡಬೇಕಾಗಿದ್ದು, ಒಂದು ವೇಳೆ ಸದರಿ ಪ್ರಯಾಣಿಕನು ಹಾಜರುಪಡಿಸುವ ದಾಖಲಾತಿಗಳು ಅನುಮಾನಾಸ್ಪದವಾಗಿದ್ದಲ್ಲಿ, ಅಂತಹ ವ್ಯಕ್ತಿಯನ್ನು ಹಾಗೂ ದಾಖಲಾತಿಗಳನ್ನು ಉಸ್ತುವಾರಿ ಪಿ.ಐ., ರವರ ಮುಂದೆ ಹಾಜರುಪಡಿಸಬೇಕೆಂದು ನಿಮಗೆ ತಿಳುವಳಿಕೆ ನೀಡಿ ಕರ್ತವ್ಯಕ್ಕೆ ನೇಮಕ ಮಾಡಿದರೂ ಸಹ ದಿನಾಂಕ:5/6–12–2007 ರಂದು ಇಮಿಗ್ರೇಷನ್ ಕ್ಲಿಯರೆನ್ಸ್ ಬಗ್ಗೆ ಕೌಂಟರ್ ನಂ–6 ರಲ್ಲಿಗೆ ಬಂದಂತ ಶ್ರೀಲಂಕಾ ದೇಶಕ್ಕೆ ಸೇರಿದವರಾದ ಶ್ರೀ ವಿಘ್ನೇಶ್ವರನ್ ಬಿನ್ ಪೆರಂಬಲನ್ ಎಂಬುವರು ಶ್ರೀ ಹರ್ಬಟ್ ಅಮಿಂದ್ ಹ್ಯಾರಿ ಎಂಬುವರಿಗೆ ಸೇರಿದ ಪಾಸ್‌ಪೋರ್ಟ್‌ನಲ್ಲಿ ತನ್ನ ಭಾವಚಿತ್ರವನ್ನು ಲಗತ್ತಿಸಿ ಹಾಜರುಪಡಿಸಿದ್ದು, ಎಲ್.ಒ.ಸಿ. ಉಪಕರಣದಲ್ಲಿ ಪರಿಶೀಲಿಸದೆ ನಕಲಿ ಪಾಸ್‌ಪೋರ್ಟ್‌ನ್ನು ಹೊಂದಿದ ಶ್ರೀ ವಿಘ್ನೇಶ್ವರನ್ನವರು ಹಾಜರುಪಡಿಸಿದ ನಿರ್ಗಮನ ಎಂಬಾರ್‌ಕೇಷನ್ ಕಾರ್ಡ್, ಬೋರ್ಡಿಂಗ್ ಪಾಸ್ ಮತ್ತು ವೀಸಾ ದಾಖಲಾತಿಗಳಿಗೆ ಇಮಿಗ್ರೇಷನ್ ಸೀಲ್‌ನಲ್ಲಿನ ಕೌಂಟರ್ ನಂಬರ್ ಕಾಣಿಸದಂತೆ ಸೀಲ್ ನಂ.006ನ್ನು ಒತ್ತಿ ಎಂಬಾರ್‌ಕೇಷನ್ ಸಹಿ ಮಾಡದೆ, ಅಕ್ರಮ ಪಾಸ್‌ಪೋರ್ಟ್ ಮೇರೆಗೆ ಸದರಿ ಪ್ರಯಾಣಿಕನು ಪ್ರಯಾಣ ಮಾಡಲು ಅವಕಾಶ ಮಾಡಿಕೊಟ್ಟು, ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆ ಅಧಿಕಾರ ದುರುಪಯೋಗ ಹಾಗೂ ಬೇಜವಾಬ್ದಾರಿತನ ಹಾಗೂ ಪೊಲೀಸ್ ಇಲಾಖೆಯ ಘನತೆಗೆ ಮಸಿ ಬಳಿಯುವ ಕಾರ್ಯ ಎಸಗಿರುತ್ತೀರಿ.:"

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:24–07–2009ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಲಾಗಿದೆ. ಹಾಗೂ ದಿನಾಂಕ: 20–12–2007 ರಿಂದ 23–01–2008 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತಿನಲ್ಲಿ ಪಡೆದ ಜೀವನಾಧಾರ ಭತ್ಯೆಗೆ ಸೀಮಿತಗೊಳಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನ್ ಪೊಲೀಸ್ ಆಯುಕ್ತರು (ಆಡಳಿತ) ಬೆಂಗಳೂರು, ಇವರ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 24–09–2009ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಿಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನೆಯನ್ನು ಮಾರ್ಪಡಿಸುವ ಸಲುವಾಗಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿದ್ದು, ಆಯೋಗವು ಶಿಸ್ತು ಪ್ರಾಧಿಕಾರದ ಮೂಲ ದಂಡನೆಗೆ ಓದಲಾದ (5)ರ ಪತ್ರದಲ್ಲಿ ಸಹಮತಿ ನೀಡಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 166 ಪೊಸಿಅ 2009 ಬೆಂಗಳೂರು, ದಿನಾಂಕ:20–03–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ಪಿ. ಮಹೇಶ್, ಮಾಜಿ ಪಿ.ಸಿ. ಪೊಲೀಸ್ ನಿಯಂತ್ರಣ ಕೋಣೆ, ಪೊಲೀಸ್ ಆಯುಕ್ತರು ರವರ ಕಛೇರಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.815

**ಟಿ.ಎನ್. ರವಿಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## INFRASTRUCTURE DEVELOPMENT SECRETARIAT

**Sub :-** Release of funds towards cost sharing Railway project- Kotturu-Harihar new broad gauge railway line project.

**Read :-**
1. G.O. No. IDD 1 NSW 2002 dated 22-03-2002
2. G.O. No. IDD 47 NSW 2003 (P) dated 26-03-2004
3. G.O. No. IDD 51 NSW 2004 dated 19-07-2004
4. G.O. No. IDD 98 NSW 2003 dated 21-10-2006
5. G.O. No. IDD 98 NSW 2003 dated 20-12-2006
6. G.O. No. IDD 98 NSW 2003 dated 05-09-2007
7. G.O. No. IDD 15 NSW 2008 dated 22-10-2008
8. G.O. No. IDD 15 NSW 2008 dated 17-12-2008
9. G.O. No. IDD 15 NSW 2008 dated 21-01-2009
10. G.O. No. IDD 15 NSW 2008 dated 04-08-2009
11. G.O. No. IDD 15 NSW 2008 dated 31-01-2010
12. Letter No. W. 359/CN/BNC/IDECK/ dated 18-02-2010 of Chief Administrative Officer, SWR, Bangalore.
13. G.O. No. FD 456 BRS 2009 dated 18-03-2010

**Preamble:**

In the Government Order's referred to at Sl. No. (1) to (11) above, Government of Karnataka has so far released an amount of Rs. 169.57 crores towards cost sharing for Kotturu-Harihar New railway line project.

2.The Chief Administraive Officer, South Western Railway, Bangalore in his letter read at Sl. No. (12) above, has stated that the railways had already incurred cumulative expenditure Rs. 264.04 crores up to 31-01-2010 towards Kotturu-Harihar new railway line project and the cumulative expenditure till the end of 2009-10 will be Rs. 301.00 crore and Government of Karnataka's share would be Rs. 32.10 crore. As such he has requested for immediate balance deposit of 2/3 share of Government of Karnataka which comes to Rs. 32.10 crores.

3. Since the amount available under New cost sharing projects is not sufficient to meet the expenditure it was proposed to re-appropriate the necessary Funds from other heads where there is savings.

4. Accordingly an amount of Rs. 25.00 crore under the Head of Account "5465-01-190-3-10-133" (Plan) – Bidar-Gulbarga Railway line-investment and an amount Rs. 6.09 crore available under Head of Account 5465-01-190-3-02- Hassan-Mangalore gauge conversion project-Investments has been re-appropriated towards cost sharing for new railway projects during 2009-10. Vide G.O. No. FD 456 BRS 2009 dated 18-03-2009 read at Sl. No. 13 above.

5. Hence this order

**Government Order No. IDD 15 NSW 2008, Bangalore, dated : 20-03-2010**

After careful examination of the request of Railways, Government is pleased to release Rs. 31.09 crores (Rupees Thirty one crore nine lakhs) only towards Kotturu-Harihar new railway line being the part of the balance 2/3$^{rd}$ share of Government of Karnataka. The above amount shall be met through reappropriation i.e., Rs. 25-00 crores from the Head of Account "5465-01-190-3-10-133" (Plan) – Bidar-Gulbarga Railway line –Investment and Rs. 6.09 crores shall be met from the Head of account 5465-01-190-3-02-Hassan-Mangalore gauge conversion project-Investments during the year 2009-10.

2. The CEO, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn

deposit the same with the Financial Advisor and Chief Accounts officer (Construction), South Western Railway, Bangalore.

3. Railways to furnish the approval obtained from the Railway Board for the revised cost along with the Utilization Certificate for the amount so far released.

4. This order is issued in accordance with concurrence of Finance Department given vide G.O. No. FD 456 BRS 2009 dated 18-03-2010.

By Order and in the name of the Governor of Karnataka

(**N. Manjula Geetha)**

P.R. 835

Under Secretary to Government
Infrastructure Development Department

**INFRASTRUCTURE DEVELOPMENT SECRETARIAT**

**Sub :-** Release of funds for pre-feasibility studies undertaken by Infrastructure Development Department under 2nd phase –reg.

**Read :-** 1. G.O. No. IDD 71 IDM 2008 dated 20-03-2009
2. G.O. No. IDD 87 2009 dated 26-08-2009
3. Letter No. DGM 2199/2009-10 dated 05-12-2009 from the DGM, KSIIDC, Bangalore

**Preamble:**

In the Government Order dated 20-03-2009 read at (1) above has released an amount of Rs. 150.00 lakhs to KSIIDC as fee for conducting the pre-feasibility study of the projects under taken.

2.In the Government Order read at (2) above, Government has released Rs. 15.00 lakhs to PPP cell of Infrastructure Development Department (IDD) for purchase of Xerox Machine and stationery things and computer peripherals etc., and the amount has been deposited with iDeCK, Bangalore.

3. The Deputy General Manager, in his letter read at (3) above, has requested the Government to release Rs. 3.00 crores out of the budget provisions for carrying out pre-feasibility study and release the same to KSIIDC for onward disbursement to the consultants. Hence this Order.

**GOVERNMENT ORDER NO. IDD 13 ITS 2010, BANGALORE, DATED : 20-03-2010**

After careful examination of the above aspects Government is pleased to accord sanction for drawal of an amount of Rs. 1.00 crore (Rs. One crore only) by KSIIDC to meet the expenditure in connection with the pre-feasibility studies undertaken by Infrastructure Development Department. KSIIDC shall maintain separate account for the amount drawn in this regard.

2. The expenditure shall be detailed to the provision made under the Head of Account 3451-00-090-1-06-059 Infrastructure Preliminary Studies – (Plan) in the budget for the year 2009-10.

3. Managing Director, KSIIDC is authorized to draw this amount on a payees receipt duly counter signed by the under Secretary to Government Infrastructure Development Department and will transfer the amount drawn to the PPP society after its information (if the amount is not spent before the formation of the society) on the direction of the Government, if need be.

4. This order is issued in accordance with the delegation of financial powers to principal Secretary to Government vide G.O. No. FD 1 TFP 2008 dated 16-05-2008.

By Order and in the name of the Governor of Karnataka

(**R. Shivalingaiah)**

P.R. 836

Under Secretary to Government
Infrastructure Development Department

## INFRASTRUCTURE DEVELOPMENT SECRETARIAT

**Sub :-** Release of GoK's Share towards Shimoga-Talaguppa gauge conversion project-Reg.

**Read :-** 1. G.O. No. IDD 52 NSW 2007 dated 24-07-2007
2. G.O. No. IDD 52 NSW 2007 dated 19-09-2007
3. G.O. No. IDD 52 NSW 2007 dated 26-12-2007
4. G.O. No. IDD 52 NSW 2007 dated 19-08-2009
5. G.O. No. IDD 52 NSW 2007 dated 04-01-2010
6. Letter No. 359/CN/BNC/IDECK dated 18-02-2010 of Chief Engineer (Con.,) SWR, Bangalore.

**Preamble:**

In the Government Order referred to at Sl No. (1) to (5) above, Government of Karnataka has released an amount of Rs. 86.50 crore towards cost sharing for Shimoga-Talaguppa gauge conversion project with the condition of having an MoU with railways for sharing this project on 50:50 cost sharing basis and getting matching share from MoR.

2.The Chief Engineer, South Western Railways, Bangalore in his letter read at Sl. No. (5) above, has requested for balance deposit of 50 % share of Government of Karnataka as the project is targeted for commissioning in the current Financial year. The share of Government of Karnataka comes to Rs. 11.04 crore as per the revised cost of Rs. 224.89 crores.

3. The proposal of Railways has been examined and it has been decided to release an amount of Rs. 11.04 crore out of the Budget of Rs. 100.00 crore provided under the Head of Account "5465-01-190-0-3-05" (Plan) 211 investment towards cost sharing for new railway projects during 2009-10. Hence this order.

**Government Order No. IDD 52 NSW 2007, Bangalore, dated : 19-03-2010**

After careful examination of the request of Railways, Government is pleased to release an amount Rs. 11.04 crore (Rupees Eleven Crore & Four Lakh only) towards Shimoga-Talaguppa guage conversion project being the part of the balance 50:50 share of Government of Karnataka.

2. The expenditure shall be met under the Head of Account **"5465-01-190-3-05" (Plan) 211 investment** out of the budget provision Rs. 100.00 crore. Towards cost sharing for new railway projects during 2009-10

3. Railways to furnish the approval obtained from the Railway Board for the revised cost along with the utilization certificate for the amount so far released.

4. The Chief executive Officer K-Ride is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railways, Bangalore.

5. This Order is issued in accordance with the concurrence of Finance Department given vide, U.O. Note. No. FD 429 Exp-I/2010 dated 17-03-2010.

By Order and in the name of the Governor of Karnataka

(**N. Manjula Geetha)**

Under Secretary to Government,

Infrastructure Development Department

P.R. 837

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ** : ಶ್ರೀ ಎಸ್.ಎ. ಭಾವಿಕಟ್ಟಿ, ಯೋಜನಾ ವ್ಯವಸ್ಥಾಪಕರು [ಕಿಯೋನಿಕ್ಸ್] ಇವರನ್ನು ದಿನಾಂಕ 4–4–2010 ರಿಂದ 10–4–2010 ರವರೆಗೆ ಸಿಂಗಪೂರ್ ಹಾಗೂ ಸಿಯೋಲ್‌ನಲ್ಲಿ ವ್ಯವಸ್ಥೆ ಮಾಡಲಾಗಿರುವ ರೋಡ್ ಶೋಗೆ ನಿಯೋಜಿಸುವ ಬಗ್ಗೆ.

**ಓದಲಾಗಿದೆ** : ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ಇವರ ಪತ್ರ ಸಂಖ್ಯೆ ಕೆಯುಎಂ/ಡಿಡಿ/ಸಿಂಗಪೂರ್/2009–10, ದಿನಾಂಕ 12–03–2010

**ಪ್ರಸ್ತಾವನೆ :**

ದಿನಾಂಕ 4–4–2010 ರಿಂದ 10–4–2010 ರವರೆಗೆ ಸಿಂಗಪೂರ್ ಹಾಗೂ ಸಿಯೋಲ್‌ನಲ್ಲಿ ಅಂತರಾಷ್ಟ್ರೀಯ ಹೂಡಿಕೆದಾರರ ಮೇಳ 2010ರ ಭಾಗವಾಗಿ ಹಮ್ಮಿಕೊಂಡಿರುವ ರೋಡ್ ಶೋಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಮತ್ತು ಮಾನ್ಯ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಸಚಿವರ ನೇತೃತ್ವದಲ್ಲಿ ತೆರುಳುತ್ತಿರುವ ನಿಯೋಗದಲ್ಲಿ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಸಹ ಭಾಗವಹಿಸುತ್ತಿದ್ದು, ನಮ್ಮ ಇಲಾಖೆಯ ಹಲವಾರು ಪ್ರಾಜೆಕ್ಟ್‌ಗಳನ್ನು ಗ್ಲೋಬಲ್ ಇನ್ವೆಸ್ಟರ್ಸ್ ಮೀಟ್ 2010ರಲ್ಲಿ ಘೋಷಿಸುತ್ತಿದ್ದು, ಈ ಬಗ್ಗೆ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ಯೋಜನೆಗಳ ಬಗ್ಗೆ ಸಮನ್ವಯ ಕಾರ್ಯ ಅವಶ್ಯವಾಗಿರುವ ಹಿನ್ನಲೆಯಲ್ಲಿ, ಸಚಿವಾಲಯದ ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಯೋಜನಾ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಎ. ಭಾವಿಕಟ್ಟಿ, ವ್ಯವಸ್ಥಾಪಕ–ತಾಂತ್ರಿಕ, ಕಿಯೋನಿಕ್ಸ್ ಇವರನ್ನು ನಿಯೋಜಿಸುವುದು ಅವಶ್ಯವೆಂದು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 28 ಎಂಐಎಸ್ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ದಿನಾಂಕ 4–4–2010 ರಿಂದ 10–4–2010ರವರೆಗೆ ಸಿಂಗಪೂರ್ ಹಾಗೂ ಸಿಯೋಲ್‌ನಲ್ಲಿ ಅಂತರಾಷ್ಟ್ರೀಯ ಹೂಡಿಕೆದಾರರ ಮೇಳ 2010ರ ಭಾಗವಾಗಿ ವ್ಯವಸ್ಥೆ ಮಾಡಲಾಗಿರುವ ರೋಡ್ ಶೋನಲ್ಲಿ ಸಮನ್ವಯ ಕಾರ್ಯ ನಿರ್ವಹಣೆಗಾಗಿ ಸಚಿವಾಲಯದ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಮತ್ತು ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಯೋಜನಾ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಎಸ್.ಎ. ಭಾವಿಕಟ್ಟಿ, ವ್ಯವಸ್ಥಾಪಕ–ತಾಂತ್ರಿಕ, ಕಿಯೋನಿಕ್ಸ್ ಇವರನ್ನು ಸದರಿ ರೋಡ್ ಶೋಗೆ ನಿಯೋಜಿಸಲು ಮಂಜೂರಾತಿ ನೀಡಲಾಗಿದೆ.

ಸದರಿಯವರ ನಿಯೋಜನೆ ವೆಚ್ಚವನ್ನು ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್. ಇಂದುಮತಿ)**
ಸರ್ಕಾರದ ಉಪ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 838

**HORTICULTURE SECRETARIAT**

**Sub :-** Release of State share for National Horticulture Mission (NHM) programme.

**Read :-** 1. Government Order No. AHD 65 HPP 2009 dated 01-10-2009

2. Government Order No. AHD 65 HPP 2009 dated 09-03-2010

3. Letter of Director of Horticulture No. ಎಂಡಿ./ಕೆ.ಎಸ್.ಹೆಚ್.ಎಂ/ವಿನಿ1/30/2009-10/2399 dated 25-02-2010 and 20-03-2010

**Preamble:**

An Amount of Rs. 2500.00 lakhs has been earmarked in the budget during 2009-10 under the State Sector Scheme namely, "State share for National Horticulture Mission", Head of Account 2401-00-800-2-30-059 (plan) towards the State share required for the said Mission programme. Out of this, Rs. 1499.00 lakhs has been released vide Government Orders read at (1) and (2) above.

2.The Director of Horticulture in his letter read at (3) above has requested the Government to release the State share. Hence the following Order.

**Government Order No. AHD 65 HPP 2009, Bangalore, dated : 20-03-2010**

Government is pleased to release to the Director of Horticulture an amount of Rs. 499.00 lakhs (Rupees Four Hundred and Ninety Nine lakhs only) under the Head of Account 2401-00-800-2-30-059 (plan) towards the State share for implementation of National Horticulture Mission programme during 2009-10.

2. This Order is issues with the concurrence of Internal Financial Advisor vide Note No. ಕೃತೋಇ 205 ಆಂಆಸ 2009 dated 15-03-2010

By Order and in the name of the Governor of Karnataka

(**S. Raju)**

Under Secretary to Government,

Horticulture Department

P.R. 839

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಕೊಪ್ಪಳ ಜಿಲ್ಲೆ ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 25.09.09ರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2009-10/5708.

**ಪ್ರಸ್ತಾವನೆ :**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೇಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮದಲಗಟ್ಟಿ, ನಿಡಶೇಷಿ ಮತ್ತು ಬ್ಯಾಲಿಹಾಳ ಗ್ರಾಮಗಳ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 71,65,082-00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 06-12-2001.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 23-10-2003.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಕುಷ್ಟಗಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯ ಕಾನೂನು ಕೋಶವು ಪತ್ರ ಸಂಖ್ಯೆ:ಆರ್‌ಡಿ 620 ಎಲ್‌ಸಿಜಿ 2009, ದಿನಾಂಕ 21-05-09 ರಲ್ಲಿ ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್.ಎ.ಸಿ. ಸಂಖ್ಯೆ | ಗ್ರಾಮ | ಸ.ನಂ. | ವಿಸ್ತೀರ್ಣ ಎ-ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 50/07 | ಮದಲಗಟ್ಟಿ | 16/1 | 2-33 | 1007557 |
| 2 | 51/07 | ನಿಡಶೇಷಿ | 28/2ಅ, 28/2ಬ | 1-33 | 638333 |
| 3 | 52/07 | ನಿಡಶೇಷಿ | 27/2 | 2-17 | 848032 |
| 4 | 53/07 | ಬ್ಯಾಲಿಹಾಳ | 11/1ಇ | 3-03 | 1088871 |
| 5 | 54/07 | ಬ್ಯಾಲಿಹಾಳ | 11/1ಆ | 3-28 | 1310084 |
| 6 | 55/07 | ನಿಡಶೇಷಿ | 26 | 0-11 | 96613 |
| 7 | 56/07 | ನಿಡಶೇಷಿ | 28/1ಅ | 2-19 | 865508 |
| 8 | 57/07 | ಬ್ಯಾಲಿಹಾಳ | 11/1ಈ | 3-28 | 1310084 |
| | ಒಟ್ಟು | | | | 7165082 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 151 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 03ನೆ ಮಾರ್ಚ್ 2009.**

ಕೊಪ್ಪಳ ಜಿಲ್ಲೆ, ಕುಷ್ಟಗಿ ತಾಲ್ಲೂಕು ನಿಡಶೀಷಿ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮದಲಗಟ್ಟಿ, ನಿಡಶೇಷಿ ಮತ್ತು ಬ್ಯಾಲಿಹಾಳ ಗ್ರಾಮಗಳ ಮೇಲ್ಕಂಡ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನದ ಮೊತ್ತ ರೂ. 71,65,082–00 ಗಳನ್ನು (ಎಪ್ಪತ್ತೊಂದು ಲಕ್ಷದ ಅರವತ್ತೈದು ಸಾವಿರದ ಎಂಭತ್ತೆರಡು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.846

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ಕೊಣ್ಣೂರ ಹುಣಶಿಕಟ್ಟಿ ಏತ ನೀರಾವರಿ ಯೋಜನೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ ಸನೀಇ 228 ಮಸಾವಿ 2009, ದಿನಾಂಕ 21.01.10.
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ರವರ ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಎಇ–6/2009–10/1587, ದಿನಾಂಕ 11–03–10.
3. ದಿನಾಂಕ 19.03.2010ರಂದು ನಡೆದ ಟೆಂಡರ್ ಪರಿಶೀಲನಾ ಸಭೆಯ ನಡವಳಿ.

**ಪ್ರಸ್ತಾವನೆ :**

ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ಕೊಣ್ಣೂರ ಹುಣಶಿಕಟ್ಟಿ ಏತ ನೀರಾವರಿ ಯೋಜನೆ ಕಾಮಗಾರಿಯ 49.70 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ ಹಾಗೂ ಮುಖ್ಯ ಇಂಜಿನಿಯರ್‌ರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಅಲ್ಪಾವಧಿ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿನಾಂಕ 20.02.10 |
| 2 | ಕನ್ನಡಪ್ರಭ ದಿನಪತ್ರಿಕೆ | ದಿನಾಂಕ 21.02.10 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಟ್ಟು ಒಬ್ಬರು ಗುತ್ತಿಗೆದಾರರು ಮಾತ್ರ ಖಾಲಿ ಟೆಂಡರ್ ಫಾರಂಗಳನ್ನು ಡೌನ್‌ಲೋಡ್ ಮಾಡಿಕೊಂಡಿದ್ದು ನಿಗದಿತ ದಿನಾಂಕದಂದು ಸದರಿ ಗುತ್ತಿಗೆದಾರರು ಇ–ಟೆಂಡರಿಂಗ್ ಮೂಲಕ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಇವರ ಟೆಂಡರ್‌ನ್ನು 02–03–10ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 48,43,784/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | | | | ರೂ. 48,41,029/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ/ ಕಡಿಮೆ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ವ್ಹಿ.ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರು | ರೂ. 57,11,003/- | 17.90 ಹೆಚ್ಚು | 17.97 ಹೆಚ್ಚು |

ಮೇಲ್ಕಂಡಂತೆ ಶ್ರೀ ವ್ಹಿ.ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 17.97 ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ 2ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 19.03.2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 48,41,029/-ಗಳ ಮೇಲೆ ಶೇಕಡ 14ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 55,18,773/-ಗಳಿಗೆ ಕಾಮಗಾರಿಯನ್ನು ಶ್ರೀ ವ್ಹಿ.ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸನೀಇ 21 ಏನೀಯೋ 2010, ಬೆಂಗಳೂರು, ದಿನಾಂಕ 20ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ, ಜಮಖಂಡಿ ತಾಲ್ಲೂಕು, ಕೊಣ್ಣೂರ ಹುಣಶಿಕಟ್ಟಿ ಏತ ನೀರಾವರಿ ಯೋಜನೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 48,41,029/- ಗಳ ಮೇಲೆ ಶೇಕಡ 14ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 55,18,773/-ಗಳಿಗೆ (ಐವತ್ತೈದು ಲಕ್ಷದ ಹದಿನೆಂಟು ಸಾವಿರದ ಏಳು ನೂರ ಎಪ್ಪತ್ಮೂರು ರೂ.ಗಳು ಮಾತ್ರ) ಶ್ರೀ ವ್ಹಿ.ಎಂ. ಹೆಬ್ಬಾಳ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3, ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.847

**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಶಿಕ್ಷಣ ಸಚಿವಾಲಯ

**ವಿಷಯ :** ಕರ್ನಾಟಕ ಪರೀಕ್ಷಾ ಪ್ರಾಧಿಕಾರದಲ್ಲಿ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯ ಸೃಜನೆಯ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಇಡಿ 20 ಟಿಇಸಿ 2010 ದಿನಾಂಕ: 17-3-2010

2. ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಆಡಳಿತ ಮಂಡಳಿಯ ಸಭೆ ದಿನಾಂಕ 18-3-2010.

**ಪ್ರಸ್ತಾವನೆ :**

ದಿನಾಂಕ 4-2-2010 ರಂದು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ಆಡಳಿತ ಮಂಡಳಿಯ ಸಭೆಯಲ್ಲಿ ಪ್ರಾಧಿಕಾರದ ಕಾರ್ಯಚಟುವಟಿಕೆಗಳನ್ನು ವಿಸ್ತಾರಗೊಳಿಸಿ ಈ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಜಾರಿಗೊಳಿಸಲು ಪ್ರಾಧಿಕಾರದ ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ಜಾರಿಗೊಳಿಸಲು ಕರ್ನಾಟಕ ಪರೀಕ್ಷಾ ಪ್ರಾಧಿಕಾರದಲ್ಲಿ ಪೂರ್ಣ ಪ್ರಮಾಣದ ಒಬ್ಬ ಕಾರ್ಯನಿರ್ವಾಹಕ ಅಧಿಕಾರಿಯ ಅವಶ್ಯಕತೆಯಿದ್ದು ಪರೀಕ್ಷಾ ಪ್ರಾಧಿಕಾರವು ವೃತ್ತಿಪರ ಕೋರ್ಸುಗಳ ವಿದ್ಯಾರ್ಥಿಗಳು ಸೀಟು ಆಯ್ಕೆಯನ್ನು ಬೆಂಗಳೂರಿನಲ್ಲಿ ನಡೆಸುವ ಬದಲಿಗೆ ಗುಲ್ಬರ್ಗಾ, ಹುಬ್ಬಳ್ಳಿ, ಶಿವಮೊಗ್ಗ ಮತ್ತು ಮಂಗಳೂರು ಇಲ್ಲಿ ಕೇಂದ್ರಗಳನ್ನು ತೆರೆದು ಪ್ರವೇಶ ಆಯ್ಕೆಗೆ ಕ್ರಮವಹಿಸಲು ಹಾಗೂ ಗ್ರಾಮೀಣ ವಿದ್ಯಾರ್ಥಿಗಳಿಗೆ ಆನ್-ಲೈನ್ ಕೋಚಿಂಗ್ ತರಗತಿಗಳನ್ನು ಏರ್ಪಡಿಸಲು ಮತ್ತು ಬಿ.ಎಡ್ ಮತ್ತು ಪಿ.ಜಿ.ಸಿ.ಇ.ಟಿ (ಎಂ.ಬಿ.ಎ. ಎಂ.ಸಿ.ಎ. ಎಂ.ಇ. ಎಂ.ಟೆಕ್) ಪರೀಕ್ಷೆಗಳನ್ನು ಹಾಗೂ ಸರ್ಕಾರಿ ಮತ್ತು ಸ್ಥಳೀಯ ಸಂಸ್ಥೆಗಳ ಕೋರಿಕೆಯ ಮೇರೆಗೆ ನೇಮಕಾತಿ ಪ್ರವೇಶ ಪರೀಕ್ಷೆ ಇತ್ಯಾದಿಯನ್ನು ಏರ್ಪಡಿಸುವುದರಿಂದ ಪ್ರಾಧಿಕಾರದ ಕಾರ್ಯ ಚಟುವಟಿಕೆಗಳು ವಿಸ್ತಾರವಾಗುವ ಹಿನ್ನೆಲೆಯಲ್ಲಿ ಒಂದು ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಪ್ರಾಧಿಕಾರದಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸೃಜಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಕರ್ನಾಟಕ ಪರೀಕ್ಷಾ ಪ್ರಾಧಿಕಾರದ 9ನೇ ಕಾರ್ಯಕಾರಿ ಸಭೆಯಲ್ಲಿ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯ ಸೃಜನೆಯ ಬಗ್ಗೆ ಚರ್ಚಿಸಿ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಸೃಜನೆ ಮಾಡಿರುವುದನ್ನು ಸ್ವಾಗತಿಸಲಾಯಿತು ಹಾಗೂ ಈ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಪ್ರಾಧಿಕಾರದ ನಿಯಮಗಳ ಷೆಡ್ಯೂಲ್-ಬಿ ನಲ್ಲಿ ನೇಮಕಾತಿ ವಿಧಾನ ಇತ್ಯಾದಿಗಳ ಬಗ್ಗೆ ಚರ್ಚಿಸಿ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಶಿಕ್ಷಣ ರಂಗದಲ್ಲಿ ಅನುಭವವಿರುವ ನಿವೃತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರ ಹುದ್ದೆಗೆ ಕಡಿಮೆ ಇಲ್ಲದ ಅಧಿಕಾರಿಯಿಂದ ಮಾತ್ರ ತುಂಬತಕ್ಕದ್ದೆಂದು ಮತ್ತು ಪ್ರಾಧಿಕಾರದ ವ್ಯಾಪ್ತಿಗೆ ಬಿ.ಎಸ್ಸಿ ನರ್ಸಿಂಗ್ ಮತ್ತು ಬಿ.ಫಾರ್ಮ ಕೋರ್ಸುಗಳ ಪ್ರವೇಶಾತಿಯನ್ನು ಒಳಪಡಿಸಲು ನಿರ್ಣಯಿಸಲಾಗಿರುತ್ತದೆ. ಅದರಂತೆ ಈ ಆದೇಶ.

### ಸರ್ಕಾರದ ಆದೇಶ ಸಂಖ್ಯೆ ಇಡಿ 20 ಟಿಇಸಿ 2010, ಬೆಂಗಳೂರು, ದಿನಾಂಕ 19ನೇ ಮಾರ್ಚ್ 2010

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಇಡಿ 20 ಟಿಇಸಿ, 2010 ದಿನಾಂಕ 17-3-2010 ನ್ನು ಭಾಗಶಃ ಮಾರ್ಪಡಿಸಿ ಕರ್ನಾಟಕ ಪರೀಕ್ಷಾ ಪ್ರಾಧಿಕಾರದಲ್ಲಿ ಒಂದು ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ಸೃಜಿಸತಕ್ಕದ್ದು ಮತ್ತು ಸದರಿ ಹುದ್ದೆಯನ್ನು ನೇಮಕಾತಿ ವಿಧಾನವನ್ನು ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ನಿಯಮಗಳ ಷೆಡ್ಯೂಲ್-ಬಿ ನಲ್ಲಿ ಈ ಹುದ್ದೆಯ ನೇಮಕಾತಿ ವಿಧಾನ ಹಾಗೂ ವೇತನ ಇತ್ಯಾದಿಗಳನ್ನು ಈ ಕೆಳಕಂಡಂತೆ ನಿಗದಿಗೊಳಿಸಲು ಆದೇಶಿಸಲಾಗಿದೆ.

1) ಶಿಕ್ಷಣ ರಂಗದಲ್ಲಿ ಅನುಭವವಿರುವ ನಿವೃತ್ತ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಹುದ್ದೆಗೆ ಕಡಿಮೆ ಇಲ್ಲದ ಅಧಿಕಾರಿಯಿಂದ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯನ್ನು ತುಂಬತಕ್ಕದ್ದು.

2) ಈ ರೀತಿ ನೇಮಕಗೊಂಡವರನ್ನು ಕನಿಷ್ಠ 5 ವರ್ಷಗಳ ಕಾಲ ಅಥವಾ 65 ವರ್ಷ ವಯಸ್ಸು ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸತಕ್ಕದ್ದು.

3) ಕರ್ನಾಟಕ ಪರೀಕ್ಷಾ ಪ್ರಾಧಿಕಾರದ ನಿಯಮಗಳು 6(3)ರ ಪ್ರಕಾರ ವ್ಯವಸ್ಥಾಪಕ ನಿರ್ದೇಶಕರ ಹುದ್ದೆಯ ಸೃಜನೆ ಹಾಗೂ ಅವರ ಸೇವಾ ಷರತ್ತುಗಳ ಬಗ್ಗೆ ಆಡಳಿತ ಮಂಡಳಿಯ ಸಭೆಯಲ್ಲಿ ಮಂಡಿಸಿ ಅದರ ಅನುಮೋದನೆ ಪಡೆದು ಸರ್ಕಾರದ ಅನುಮೋದನೆಗಾಗಿ ಸಲ್ಲಿಸತಕ್ಕದ್ದು.

4) ನಿವೃತ್ತ ಅಧಿಕಾರಿಯು ನಿವೃತ್ತಿಯ ನಂತರ ಮರು ನೇಮಕಾತಿ ಆಗುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಗಳು ನಿಯಮ 313(ಬಿ) ರನ್ವಯ ಆ ಅಧಿಕಾರಿಯು ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ವೇತನದಲ್ಲಿ ನಿವೃತ್ತಿ ವೇತನವನ್ನು ಕಳೆದು ಬರುವಂತಹ ಮೊತ್ತವನ್ನು ಮರುನೇಮಕಾತಿಗೆ ಮೂಲವೇತನವೆಂದು ಪರಿಗಣಿಸಿ ನಂತರ ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನಕ್ಕೆ ದೊರಕಬಹುದಾದ ದಿನಭತ್ಯೆ, ಮನೆ ಬಾಡಿಗೆ ಭತ್ಯೆ ಮತ್ತು ನಗರ ಪರಿಹಾರ ಭತ್ಯೆಗಳನ್ನು ನೀಡಬಹುದಾಗಿದೆ: ಆದರೆ ಮರುನೇಮಕಾತಿ ಹುದ್ದೆಯಲ್ಲಿ ನಿಗದಿಪಡಿಸಿದ ವೇತನಕ್ಕೆ ಯಾವುದೇ ವಿಶೇಷ ಭತ್ಯೆಗಳನ್ನು ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 195 ವೆಚ್ಚ–8 2010. ದಿನಾಂಕ 15–03–2010 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 848

**(ಬಿ.ಎಸ್. ನಾಗರಾಜ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ)
ಶಿಕ್ಷಣ ಇಲಾಖೆ (ತಾಂತ್ರಿಕ ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ವೆಂಕಟೇಶ್ವರ ಶಿಕ್ಷಣ ಮಹಾವಿದ್ಯಾಲಯ; ಚಿತ್ರದುರ್ಗ ಇದನ್ನು ವೇತನಾನುದಾನಕ್ಕೆ ಒಳಪಡಿಸುವ ಕುರಿತು.

**ಉಲ್ಲೇಖ :**
1. ಶ್ರೀ ದೇವರಾಜ ಅರಸ್ ಎಜುಕೇಷನ್ ಸೊಸೈಟಿ (ರಿ). ಚಿತ್ರದುರ್ಗ ಇವರ ಮನವಿ ದಿನಾಂಕ 05–03–2009
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 176 ಯುಜಿವಿ 2004 (ಭಾಗ), ದಿನಾಂಕ 19–05–2009 ಮತ್ತು ಇದೇ ಸಮ ಸಂಖ್ಯೆಯ ತಿದ್ದುಪಡಿ ಆದೇಶ ದಿನಾಂಕ 26–10–2009.
3. ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 06 ವಿವಿಧ 2001, ದಿನಾಂಕ 12–10–2001.
4. ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ:ಶಿತ3.ಇತರೆ ಅನುದಾನ 02/2004–05, ದಿನಾಂಕ 25–03–2005

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾಗಿರುವ ಮನವಿಯಲ್ಲಿ ಕಾರ್ಯದರ್ಶಿ, ಶ್ರೀ ದೇವರಾಜ ಅರಸ್ ಎಜುಕೇಷನ್ ಸೊಸೈಟಿ (ರಿ), ಚಿತ್ರದುರ್ಗ ಇವರು ತಮ್ಮ ಆಡಳಿತ ಮಂಡಳಿಯ ಅಧೀನದಲ್ಲಿ ನಡೆಯುತ್ತಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದ, ದಿನಾಂಕ 10–09–1987ರಲ್ಲಿ ಆರಂಭವಾಗಿರುವ ಬಿ.ಎಡ್. ಶಿಕ್ಷಣ ಸಂಸ್ಥೆಯಾಗಿದ್ದು, ಇದನ್ನು ಅನುದಾನಕ್ಕೊಳಪಡಿಸಲು ಮನವಿ ಮಾಡಿರುತ್ತಾರೆ.

ಮೇಲೆ (2) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ, ದಿನಾಂಕ 01–06–1987ರ ಪೂರ್ವದಲ್ಲಿ ಪ್ರಾರಂಭವಾಗಿ ನಿರಂತರವಾಗಿ ನಡೆಯುತ್ತಿರುವ ರಾಜ್ಯದ 21 ಬಿ.ಎಡ್. ಕಾಲೇಜುಗಳಿಗೆ (ಶಿಕ್ಷಣ ಮಹಾವಿದ್ಯಾಲಯಗಳು) ಅನುದಾನಕ್ಕೆ ಒಳಪಡಿಸಲು ಸರ್ಕಾರವು ತೀರ್ಮಾನಿಸಿದೆ. ಹಾಗೆಯೇ, ಮೇಲೆ ಓದಲಾಗಿರುವ ತಿದ್ದುಪಡಿ ಆದೇಶದ ಮೂಲಕ ಮೇಲೆ (1)ರಲ್ಲಿ ಓದಲಾದ ಮುಖ್ಯ ಆದೇಶದಲ್ಲಿನ ಷರತ್ತು ಸಂಖ್ಯೆ:4 ಅನ್ನು ಕೈಬಿಡಲಾಗಿದೆ.

ಮೇಲೆ (3) ರಲ್ಲಿ ಓದಲಾಗಿರುವ ಸರ್ಕಾರಿ ಅಧಿಸೂಚನೆಯಲ್ಲಿ 100 ವಿದ್ಯಾರ್ಥಿಗಳ ಸಂಖ್ಯಾಬಲವಿರುವ ಶಿಕ್ಷಣ ಮಹಾವಿದ್ಯಾಲಯಗಳಲ್ಲಿ ಬೋಧಕ ಮತ್ತು ಬೋಧಕೇತರ ಮಾದರಿಯನ್ನು (ಸ್ಟಾಫ್ ಪ್ಯಾಟರ್ನ್) ನಿರ್ಧರಿಸಿದ್ದು, ಆ ಪ್ರಕಾರ ಒಬ್ಬ ಪ್ರಾಂಶುಪಾಲರು, ರೀಡರ್‌ಗಳು, ಉಪನ್ಯಾಸಕರುಗಳು ಸೇರಿದಂತೆ ಒಟ್ಟು 10 ಬೋಧಕ ಹುದ್ದೆಗಳು ಮತ್ತು 17 ವಿವಿಧ ಬೋಧಕೇತರ ಹುದ್ದೆಗಳು., ಈ ರೀತಿ ಒಟ್ಟು 27 ಹುದ್ದೆಗಳ ಮಂಜೂರಾತಿಗೆ ಅವಕಾಶವಿರುತ್ತದೆ.

ಮೇಲೆ (4)ರಲ್ಲಿ ಓದಲಾಗಿರುವ ಪತ್ರದಲ್ಲಿ ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯ ನಿರ್ದೇಶಕರು, ಶ್ರೀ ವೆಂಕಟೇಶ್ವರ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ಇದನ್ನು ವೇತನಾನುದಾನಕ್ಕೆ ಒಳಪಡಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಅದರಲ್ಲಿ ಪ್ರಾಂಶುಪಾಲರು ಸೇರಿದಂತೆ 9 ಜನ ಬೋಧಕ ಸಿಬ್ಬಂದಿ ಮತ್ತು ಒಬ್ಬ ಗ್ರಂಥಪಾಲಕರು, ಒಬ್ಬ ದೈಹಿಕ ಶಿಕ್ಷಣ ನಿರ್ದೇಶಕರು ಸೇರಿದಂತೆ ಒಟ್ಟು 12 ಮಂದಿ ಬೋಧಕೇತರ ಸಿಬ್ಬಂದಿ ವರ್ಗದವರು ಶ್ರೀ ವೆಂಕಟೇಶ್ವರ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಇವರುಗಳಿಗೆ ವಾರ್ಷಿಕ ವೇತನದ ವೆಚ್ಚ ರೂ. 20.40 ಲಕ್ಷ ಆಗುತ್ತದೆಂದು ಅಂದಾಜು ಮಾಡಿರುತ್ತಾರೆ.

ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆಯು ದಿನಾಂಕ 01–06–1987 ಕ್ಕೆ ಮಂಚೆ ಪ್ರಾರಂಭವಾಗಿ ನಿರಂತರವಾಗಿ ನಡೆಯುತ್ತಿರುವ ಬಿ.ಎಡ್. ಶಿಕ್ಷಣ ಸಂಸ್ಥೆಗಳನ್ನು ಅನುದಾನಕ್ಕೊಳಪಡಿಸಲು ಸಲ್ಲಿಸಿದ್ದ ಪ್ರಸ್ತಾವನೆಗಳ ಪೈಕಿ ಯಾವುದೇ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಬಿ.ಎಡ್. ಶಿಕ್ಷಣ ಸಂಸ್ಥೆ ಇರುವುದಿಲ್ಲ. ದಿನಾಂಕ 01–06–1987 ರ ಪೂರ್ವದಲ್ಲಿ ಪ್ರಾರಂಭವಾಗಿ, ನಿರಂತರವಾಗಿ ಕಾರ್ಯ ನಿರ್ವಹಿಸುತ್ತಿರುವ 21 ಶಿಕ್ಷಣ ಮಹಾವಿದ್ಯಾಲಯಗಳಿಗೆ ಮಾತ್ರ ವೇತನ ಅನುದಾನದ ಸೌಲಭ್ಯ ಒದಗಿಸಲು ಸರ್ಕಾರವು ತೀರ್ಮಾನಿಸಿದ್ದರೂ, ಶ್ರೀ ವೆಂಕಟೇಶ್ವರ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ವಿದ್ಯಾ ಸಂಸ್ಥೆಯು 01–06–1987 ಕ್ಕೆ ಮುಂಚೆ ಪ್ರಾರಂಭವಾಗದಿದ್ದರೂ, ಇದು ದಿನಾಂಕ 10–09–1987 ರಂದು ಪ್ರಾರಂಭವಾಗಿ, ಕೇವಲ ಮೂರು ತಿಂಗಳುಗಳು ತಡವಾಗಿದ್ದು, ಇದು ನಿರಂತರವಾಗಿ ಕಾರ್ಯ ನಿರ್ವಹಿಸುತ್ತಿದ್ದು, ಏಕೈಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಶಿಕ್ಷಣ ಸಂಸ್ಥೆಯಾಗಿದ್ದರಿಂದ, ಈ ವರ್ಗದವರಿಗೆ ಉತ್ತೇಜನ ನೀಡುವ ಸಲುವಾಗಿ

ಸರ್ಕಾರವು ನೆರವು ನೀಡಬೇಕೆಂದು ಈ ಸಂಸ್ಥೆಯ ಆಡಳಿತ ಮಂಡಳಿಯು ಮಾಡಿರುವ ಕೋರಿಕೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 41 ಯುಎನ್ಇ 2009, ಬೆಂಗಳೂರು, ದಿನಾಂಕ 10ನೇ ಮಾರ್ಚ್ 2010**

ಶ್ರೀ ದೇವರಾಜ ಅರಸ್ ಎಜುಕೇಷನ್ ಸೊಸೈಟಿ (ರಿ). ಪ್ರಶಾಂತ ನಗರ, ಚಿತ್ರದುರ್ಗ ಇವರ ಆಡಳಿತದಲ್ಲಿ ನಡೆಯುತ್ತಿರುವ ಶ್ರೀ ವೆಂಕಟೇಶ್ವರ ಶಿಕ್ಷಣ ಮಹಾವಿದ್ಯಾಲಯ, ಚಿತ್ರದುರ್ಗ ಇಲ್ಲಿನ ಪ್ರಾಂಶುಪಾಲರು ಸೇರಿದಂತೆ 9 ಜನ ಬೋಧಕ ಸಿಬ್ಬಂದಿ ಮತ್ತು ಒಬ್ಬ ಗ್ರಂಥಪಾಲಕರು, ಒಬ್ಬ ದೈಹಿಕ ಶಿಕ್ಷಣ ನಿರ್ದೇಶಕರು ಒಳಗೊಂಡಂತೆ ಒಟ್ಟು 12 ಮಂದಿ ಬೋಧಕೇತರ ಸಿಬ್ಬಂದಿಯ ಹುದ್ದೆಗಳಿಗೆ ಈ ಕೆಳಕಂಡ ಷರತ್ತು/ನಿಬಂಧನೆಗೊಳಪಟ್ಟು ವೇತನಾನುದಾನಕ್ಕೆ ಒಳಪಡಿಸಿ ಆದೇಶಿಸಿದೆ.

**ಷರತ್ತು/ನಿಬಂಧನೆಗಳು:**

1. ಅನುದಾನ ಸಂಹಿತೆ/ಎನ್‌ಸಿಟಿಇ ಮಾನದಂಡಗಳ ಪ್ರಕಾರ ಅಗತ್ಯ ಶೈಕ್ಷಣಿಕ ಮತ್ತು ಮೂಲಭೂತ ಸೌಲಭ್ಯಗಳನ್ನು ಹೊಂದಿರಬೇಕು.
2. ಅನುದಾನ ಸಂಹಿತೆ/ಎನ್‌ಸಿಟಿಇಯ ಮಾನದಂಡಗಳ ಪ್ರಕಾರ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ವರ್ಗೀಕರಿಸಿ ನಿಗದಿಪಡಿಸಿರಬೇಕು.
3. ಕರ್ನಾಟಕ ರಾಜ್ಯ ಸರ್ಕಾರದ ಶಿಕ್ಷಣ ಇಲಾಖೆಯ/ಎನ್‌ಸಿಟಿಇಯ ಕಾಲ ಕಾಲಕ್ಕೆ ಜಾರಿಯಲ್ಲಿರುವ ನೇಮಕಾತಿ ನಿಯಮಗಳ ಪ್ರಕಾರ ಹುದ್ದೆಗಳ ವಿದ್ಯಾರ್ಹತೆ, ವಯೋಮಿತಿ ಹಾಗೂ ಇತರ ಶೈಕ್ಷಣಿಕ ಅರ್ಹತೆಗಳನ್ನು ನಿಗದಿಪಡಿಸಿ, ಅವುಗಳನ್ನು ಪಾಲಿಸಿರಬೇಕು.
4. ಹುದ್ದೆಗಳನ್ನು ಭರ್ತಿ ಮಾಡುವ ಮುನ್ನ ಸಂಬಂಧಿಸಿದ ಪ್ರಾಧಿಕಾರದಿಂದ ಪೂರ್ವಾನುಮತಿ ಪಡೆದಿರಬೇಕು. ಅನುಮೋದನೆ ಪಡೆಯದೇ ಇರುವ ಹುದ್ದೆಗಳನ್ನು ಅನುಮೋದನೆಗೊಳಿಸಕೊಂಡ ನಂತರ ವೇತನಾನುದಾನ ಸಹಿತ ಅನುಮೋದನೆಯನ್ನು ಪಡೆಯಬೇಕಾಗಿದೆ.
5. ಮೀಸಲಾತಿಗೆ ಸಂಬಂಧಿಸಿದಂತೆ ಸರ್ಕಾರವು ಕಾಲ ಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸಿರಬೇಕು.
6. ಪ್ರಸ್ತಾಪಿತ ಕಾಲೇಜಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಯಾವುದೇ ವಿವಾದ ಇರುವುದಿಲ್ಲ ಎಂಬುದನ್ನು ದೃಢಪಡಿಸಿಕೊಂಡ ನಂತರವೇ ವೇತನ ಅನುದಾನವನ್ನು ಮಂಜೂರು ಮಾಡಲಾಗುವುದು.

ಈ ಆದೇಶವು ಕರ್ನಾಟಕ ಸರ್ಕಾರ (ವ್ಯವಹಾರ ನಿರ್ವಹಣೆ) ನಿಯಮಗಳು. 1977ರ ನಿಯಮ 17 (2) ಪರಿಧಿಯಲ್ಲಿ ಬರುತ್ತದೆ ಮತ್ತು ಈ ಆದೇಶವನ್ನು ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಬಿ. ಉಳವಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

ಪಿ.ಆರ್.849

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** ಬೀದರ್ ಕಂದಾಯ ತಾಲ್ಲೂಕಿನಲ್ಲಿ ಖಾಲಿ ಇರುವ ನೋಟರಿ ಹುದ್ದೆಯನ್ನು ಭರ್ತಿ ಮಾಡುವ ಬಗ್ಗೆ. (ಶ್ರೀ ವೈಜನಾಥ್ ಪಾಟೀಲ್‌ರವರಿಂದ ತೆರವು)

**ಉಲ್ಲೇಖ :** 1) ಸರ್ಕಾರದ ಪತ್ರ ಸಂಖ್ಯೆ ಲಾ 1 ಎಲ್‌ಸಿಎಲ್ 09, ದಿನಾಂಕ: 09–01–2009

2) ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರ ಕಛೇರಿ ಪತ್ರಗಳು
   ಅ) ಸಂಖ್ಯೆ ಎಡಿಎಂ/131/2009 ದಿನಾಂಕ 17–07–2009
   ಆ) ಸಂಖ್ಯೆ ಎಡಿಎಂ/131/09 ದಿನಾಂಕ 18.12.2009

3) ನೋಟರಿಗಳ ತಿದ್ದುಪಡಿ ನಿಯಮಗಳು 2009ರ ಅಧಿಸೂಚನೆ ಸಂಖ್ಯೆ ಜಿಎಸ್‌ಆರ್ 114(ಇ) ದಿನಾಂಕ 24–02–2009

4) ಅಧಿಸೂಚನೆ ಸಂಖ್ಯೆ ಲಾ 61 ಎಲ್‌ಸಿಎಲ್ 2009 ದಿನಾಂಕ 18.07.2009 ಹಾಗೂ ತಿದ್ದೋಲೆ ದಿನಾಂಕ 26.11.2009

5) ಸಂದರ್ಶನ ಸೂಚನಾ ಪತ್ರ ಸಂಖ್ಯೆ ಲಾ 1 ಎಲ್‌ಸಿಎಲ್ 2009 ದಿನಾಂಕ 18.01.2010 ಹಾಗೂ ತಿದ್ದೋಲೆ ದಿನಾಂಕ 25.01.2010.

**ಪ್ರಸ್ತಾವನೆ :**

ಬೀದರ್ ಕಂದಾಯ ತಾಲ್ಲೂಕಿನಲ್ಲಿ ನೋಟರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಶ್ರೀ ವೈಜನಾಥ್ ಪಾಟೀಲ್ ಇವರಿಂದ ತೆರವಾದ ನೋಟರಿ ಹುದ್ದೆಯನ್ನು ಭರ್ತಿ ಮಾಡಲು ನೋಟರಿಗಳ ಅಧಿನಿಯಮ/ನಿಯಮಗಳು ಹಾಗೂ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮಗಳಡಿಯಲ್ಲಿ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೀದರ್ ಇವರನ್ನು ಉಲ್ಲೇಖಿತ (1)ರ ದಿನಾಂಕ 09.01.2009ರ ಪತ್ರದಲ್ಲಿ ಕೋರಲಾಗಿತ್ತು. ಅದರಂತೆ ಉಲ್ಲೇಖಿತ (2)ರ ದಿನಾಂಕ17.07.2009 ಹಾಗೂ 18.12.2009ರ ಪತ್ರಗಳಲ್ಲಿ 34 ಜನರ ಮೆಮೋರಿಯಲ್ಸ್‌ಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆ ಪ್ರಸ್ತಾವನೆಯನ್ನು ಉಲ್ಲೇಖಿತ (3)ರ ನೋಟರಿಗಳ ತಿದ್ದುಪಡಿ ನಿಯಮಗಳು 2009 ರನ್ವಯ ಕರ್ನಾಟಕ ರಾಜ್ಯದಿಂದ ನೋಟರಿಗಳ ನೇಮಕಕ್ಕಾಗಿ ಉಲ್ಲೇಖಿತ (4)ರಲ್ಲಿ ರಚಿಸಲಾಗಿರುವ ಸಂದರ್ಶನ ಮಂಡಳಿಯ ಪರಿಶೀಲನೆಗೆ ಕಳಿಸಿ ಎಲ್ಲಾ ಅಭ್ಯರ್ಥಿಗಳನ್ನು ಸಂದರ್ಶನ ಮಂಡಳಿಯ ಮುಂದೆ ಸಂದರ್ಶನಕ್ಕೆ ಹಾಜರಾಗುವಂತೆ ಉಲ್ಲೇಖಿತ (5)ರ ಸೂಚನಾ ಪತ್ರಗಳಲ್ಲಿ ಸೂಚಿಸಲಾಗಿತ್ತು. ಅದರಂತೆ ಸಂದರ್ಶನ ಮಂಡಳಿಯು ಸಂದರ್ಶನ ನಡೆಸಿ ದಿನಾಂಕ 05.02.2010 ರಂದು ಆಯ್ಕೆ ಪಟ್ಟಿಯನ್ನು ಸಲ್ಲಿಸಿದೆ.

ಸಂದರ್ಶನ ಮಂಡಳಿಯ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ. ಲಾ 01 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ 12ನೇ ಮಾರ್ಚ್ 2010**

ನೋಟರಿ ನಿಯಮಗಳು (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು (1956) ಹಾಗೂ ತಿದ್ದುಪಡಿ ನಿಯಮಗಳು 2009ರನ್ವಯ ನಿಯಮ 8(1)ರಲ್ಲಿ ಪ್ರದತ್ತವಾದ ಅಧಿಕಾರದಂತೆ ಶ್ರೀ ಠಾಕೂರ್ ವೀರೇಂದ್ರ ಸಿಂಗ್, ವಕೀಲರು, ಹೆಚ್.ನಂ. 8-9-239, ಗುರುನಗರ್, ಬೀದರ್-585401 ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೀದರ್ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು, ಲೆಕ್ಕ ಶೀರ್ಷಿಕೆ 0070-ಇತರೆ-ಆಡಳಿತಾತ್ಮಕ-ಸೇವೆಗಳು-01-ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06-ಇತರೆ ಬಾಬುಗಳಿಗೆ (0070-01-501-0-06) ನೋಟರಿ ನಿಯಮಗಳಲ್ಲಿ ನಿಗದಿಪಡಿಸಲಾದ ರೂ. 1000/- (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಜಮಾ ಮಾಡಿ, ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರನ್ವಯ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 850

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ**

**ವಿಷಯ** : ರಾಮನಗರ ರೈಲು ನಿಲ್ದಾಣದ ಬಳಿ ಇರುವ ಎಲ್.ಸಿ.ಸಂ. 37ರ ರಸ್ತೆ ಕೆಳಸೇತುವೆ ನಿರ್ಮಾಣದ ಬದಲಿಗೆ ಕೂಡು (ತಿರುವು) ರಸ್ತೆಯನ್ನು ನಿರ್ಮಿಸಲು ಅನುಮೋದನೆ ನೀಡಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರಿ ಆದೇಶ ಸಂ. ಮೂಅಇ 43 ರಾರಾಹೆ 09, ದಿನಾಂಕ : 16-1-2010

**2.** ತಿದ್ದುಪಡಿ ಆದೇಶ ಸಂ. ಮೂಅಇ 43 ರಾರಾಹೆ 09, ದಿನಾಂಕ : 9-2-2010

**3.** ದಿನಾಂಕ : 23-2-2010 ಸಂಖ್ಯೆ : ಕಾಇಂ/ಲೋಇ/ರಾವಿ/ರಾಮನಗರ/ಲೆಶಾ/ಲೆಸ/2/RoB/ಅನುದಾನ ಹಿಂದಿರುಗಿಸುವ ಬಗ್ಗೆ/09-10ರ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ ವಿಭಾಗ, ರಾಮನಗರ ರವರ ಪತ್ರ.

**4.** ದಿನಾಂಕ : 9-3-2010 ಸಂಖ್ಯೆ : ಕಾಇಂ/ಲೋಇ/ರಾವಿ/ರಾಮನಗರ/ಲೆಶಾ/ಲೆಸ/2 RoB /ಅನುದಾನ ಹಿಂದಿರುಗಿಸುವ ಬಗ್ಗೆ/09-10ರ ಕಾರ್ಯಾಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ ವಿಭಾಗ, ರಾಮನಗರ ರವರ ಪತ್ರ.

**ಪ್ರಸ್ತಾವನೆ :**

ರಾಮನಗರ ರೈಲು ನಿಲ್ದಾಣದ ಬಳಿಯಿರುವ ಎಲ್.ಸಿ. ಸಂ 37ರಲ್ಲಿ ರಸ್ತೆ ಕೆಳಸೇತುವೆ ಬದಲಿಗೆ ತಿರುವು ರಸ್ತೆಯನ್ನು ನಿರ್ಮಿಸುವ ಕಾಮಗಾರಿಗೆ ತಗಲುವ ರೂ 415.00 ಲಕ್ಷಗಳ ಪರಿಷ್ಕೃತ ಅಂದಾಜಿಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಶೇ 50:50 ರಷ್ಟು ವೆಚ್ಚವನ್ನು ಭರಿಸುವ ಷರತ್ತಿನೊಂದಿಗೆ ರಾಜ್ಯ ಸರ್ಕಾರದ ಪಾಲಿನ ಮೊತ್ತ ರೂ. 207.50 ಲಕ್ಷಗಳನ್ನು ಓದಲಾದ (1)ರ ಆದೇಶದಲ್ಲಿ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಇವರಿಗೆ ಬಿಡುಗಡೆ ಮಾಡಲಾಗಿತ್ತು.

ಅನಂತರ ಮೇಲೆ (2)ರಲ್ಲಿ ಓದಲಾದ ತಿದ್ದುಪಡಿ ಆದೇಶದಲ್ಲಿ ಈ ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ ವಿಭಾಗ, ರಾಮನಗರ ಇವರು ಸವಿವರ ಸಾದಿಲ್ವಾರು ಬಿಲ್ಲಿನ ಮೂಲಕ ಸೆಳೆದು ಸಂಬಂಧಪಟ್ಟವರಿಗೆ ಖಜಾನೆ ಚೆಕ್ ಮೂಲಕ ಕೊಡತಕ್ಕದೆಂದು ಸೂಚಿಸಲಾಗಿತ್ತು. ಅನಂತರ ಈ ಮೊತ್ತವನ್ನು ರಾಮನಗರ ಜಿಲ್ಲಾ ಖಜಾನೆಗೆ ಅಪ್‌ಲೋಡ್ ಮಾಡಲಾಗಿದ್ದಿತು.

ಸದರಿ ಕಾಮಗಾರಿಗೆ ಆಡಳಿತಾತ್ಮಕ ಮಂಜೂರಾತಿ ಹಾಗೂ ಅಂದಾಜು ಪಟ್ಟಿಯ ಮಂಜೂರಾತಿ ದೊರೆಯದೇ ಇರುವುದರಿಂದ ಹಾಗೂ ಟೆಂಡರ್ ಪ್ರಕ್ರಿಯೆಯು ಪ್ರಗತಿಯಲ್ಲಿರುವುದರಿಂದ ಬಿಡುಗಡೆ ಮಾಡಿರುವ ಮೊತ್ತವನ್ನು ಪ್ರಸಕ್ತ ಹಣಕಾಸಿನ ವರ್ಷದಲ್ಲಿ ಭರಿಸಲು ಸಾಧ್ಯವಾಗದೇ ಇರುವುದರಿಂದ ಸದರಿ ಮೊತ್ತವನ್ನು ಸರ್ಕಾರಕ್ಕೆ ಅಧ್ಯರ್ಪಿಸಲಾಗಿದೆಯೆಂದು ಈ ಹಣವನ್ನು 2010–11ನೇ ಸಾಲಿನಲ್ಲಿ ಬಿಡುಗಡೆ ಮಾಡುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ ವಿಭಾಗ, ರಾಮನಗರ ರವರು ತಿಳಿಸಿರುತ್ತಾರೆ.

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಬಿಡುಗಡೆ ಮಾಡಿರುವ ಮೊತ್ತವನ್ನು ಪ್ರಸಕ್ತ ಸಾಲಿನಲ್ಲಿ ಕಾಮಗಾರಿಗೆ ಭರಿಸಲು ಸಾಧ್ಯವಾಗದೇ ಇರುವುದರಿಂದ ಸದರಿ ಮೊತ್ತವನ್ನು ರಾಮನಗರ ಜಿಲ್ಲಾಧಿಕಾರಿಗಳ ವೈಯಕ್ತಿಕ ಖಾತೆಗೆ ನೀಡಬೇಕೆಂದು ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ, ರಾಮನಗರ ವಿಭಾಗ, ರಾಮನಗರ ರವರು ಮೇಲೆ ಓದಲಾಧ (4)ರ ಪತ್ರದಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಸರ್ಕಾರವು ನಿರ್ಧರಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 43 ರಾರಾಹೆ 2009, ಬೆಂಗಳೂರು, ದಿನಾಂಕ: 18–3–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮನಗರ ರೈಲ್ವೆ ನಿಲ್ದಾಣದ ಬಳಿ ಇರುವ ಎಲ್.ಸಿ. ನಂ 37ರಲ್ಲಿ ರಸ್ತೆ ಕೆಳಸೇತುವೆಯನ್ನು ನಿರ್ಮಿಸುವ ಬದಲಾಗಿ ಸೇತುವೆಗೆ ಕೂಡ ರಸ್ತೆ (ತಿರುವು ರಸ್ತೆ) ನಿರ್ಮಿಸುವ ಕಾಮಗಾರಿಗೆ ದಿನಾಂಕ : 16–1–2010ರ ಆದೇಶದಲ್ಲಿ ರಾಮನಗರ ವಿಭಾಗದ ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಅಭಿಯಂತರರಿಗೆ ಬಿಡುಗಡೆ ಮಾಡಲಾದ ರೂ. 207.5 (ಎರಡು ಕೋಟಿ ಏಳು ಲಕ್ಷದ ಐವತ್ತು ಸಾವಿರಗಳು ಮಾತ್ರ) ಮೊತ್ತವನ್ನು ಹಿಂದಕ್ಕೆ ಪಡೆಯಲಾಗಿದೆ. ಸದರಿ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "5465–01–190–3–04–(ಯೋಜನೆ)–211 ಬಂಡವಾಳ" ಇದರ ಅಡಿಯಲ್ಲಿ ಕೆಳಸೇತುವೆ/ಮೇಲು ಸೇತುವೆಗಳ ನಿರ್ಮಾಣಕ್ಕೆ ಒದಗಣೆ ಮಾಡಿರುವ ರೂ. 30.00 ಕೋಟಿಗಳಿಂದ ಕೆ–ರೈಡ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

2. ಈ ಮೊತ್ತವನ್ನು ಮುಖ್ಯ ಕಾರ್ಯ ನಿರ್ವಾಹಣಾಧಿಕಾರಿ, ಕೆ–ರೈಡ್ ಇವರು ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಸರ್ಕಾರದ ಅಧೀನ ಕಾರ್ಯದರ್ಶಿಯವರ ಮೇಲು ರುಜುವಿನೊಂದಿಗೆ ಪೇಯಿಸ್ ರಸೀತಿ ಮೂಲಕ ಡ್ರಾಮಾಡಿ ಎಲ್.ಸಿ. ಸಂ. 37 ರಲ್ಲಿ ರಸ್ತೆ ಕೆಳಸೇತುವೆ ಬದಲಿಗೆ ಕೂಡು ರಸ್ತೆ (ತಿರುವು ರಸ್ತೆ) ನಿರ್ಮಾಣದ ವೆಚ್ಚ ಭರಿಸತಕ್ಕದ್ದು.

3. ಈ ಆದೇಶವನ್ನು ದಿನಾಂಕ : 16–5–2008 ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008 ಸರ್ಕಾರಿ ಆದೇಶದಲ್ಲಿ ಇಲಾಖೆ ಪ್ರಧಾನ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಎನ್. ಮಂಜುಳಗೀತ)
ಸರ್ಕಾರದ ಅಧೀನ ಕಾರ್ಯದರ್ಶಿ
ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

ಪಿ.ಆರ್. 824

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ** : ಶ್ರೀ ಎ.ಎಂ. ಫರೂಕ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಪರಿಸರ ಮೇಲ್ಮನವಿ ಪ್ರಾಧಿಕಾರ, ಇವರ ನೇಮಕಾತಿ ಪರಿಷ್ಕೃತ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಗೊಳಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ : ಅಪಜೀ 97 ಇಪಿಸಿ 2006, ದಿನಾಂಕ : 30–4–2008
2. ಅಧಿಸೂಚನೆ ಸಂಖ್ಯೆ : ಅಪಜೀ 97 ಇಪಿಸಿ 2006, ದಿನಾಂಕ : 23–7–2008
**3. ಅಧ್ಯಕ್ಷರು, ಮೇಲ್ಮನವಿ ಪ್ರಾಧಿಕಾರ ಇವರ ಪತ್ರ ದಿನಾಂಕ : 7–8–2008**

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ : 1 ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಎ.ಎಂ. ಫರೂಕ್, ನಿವೃತ್ತ ಉಚ್ಚ ನ್ಯಾಯಾಲಯದ ನ್ಯಾಯಾಧೀಶರು, ಇವರನ್ನು ಕರ್ನಾಟಕ ರಾಜ್ಯ ಮೇಲ್ಮನವಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಿಸಲಾಗಿರುತ್ತದೆ. ಕ್ರಮ ಸಂಖ್ಯೆ : 2ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಮೇಲ್ಮನವಿ ಪ್ರಾಧಿಕಾರದ ಅಧ್ಯಕ್ಷರನ್ನಾಗಿ ನೇಮಕ ಮಾಡಿ ಷರತ್ತು ಮತ್ತು ನಿಬಂಧನೆಗಳನ್ನು

ಹೊರಡಿಸಲಾಗಿದೆ. ಕ್ರಮ ಸಂಖ್ಯೆ : 3ರಲ್ಲಿ ಓದಲಾದ ಮೇಲ್ಮನವಿ ಪ್ರಾಧಿಕಾರದ ಅಧ್ಯಕ್ಷರ ಪತ್ರದಲ್ಲಿ ಅವರ ಸೇವಾ ಷರತ್ತುಗಳನ್ನು ಪರಿಷ್ಕರಿಸಿ ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ ನೀಡುವ ವೇತನ ಮತ್ತಿತರ ಸೌಲಭ್ಯಗಳನ್ನು ನಿಗದಿಪಡಿಸುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 1 ಇಪಿಸಿ 2009, ಬೆಂಗಳೂರು, ದಿನಾಂಕ: 9-3-2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಎ.ಎಂ. ಫರೂಕ್, ಅಧ್ಯಕ್ಷರು, ಕರ್ನಾಟಕ ರಾಜ್ಯ ಪರಿಸರ ಮೇಲ್ಮನವಿ ಪ್ರಾಧಿಕಾರ, ಇವರ ನೇಮಕಾತಿಗೆ ಸಂಬಂಧಿಸಿದಂತೆ ದಿನಾಂಕ : 30-4-2008 ರಿಂದ ಜಾರಿಗೆ ಬರುವಂತೆ ಪರಿಷ್ಕೃತ ಸೇವಾ ಷರತ್ತು ಮತ್ತು ನಿಬಂಧನೆಗಳನ್ನು ಈ ಕೆಳಗಿನಂತೆ ನಿಗದಿಗೊಳಿಸಲಾಗಿದೆ.

1. ವೇತನ : ಉಚ್ಚ ನ್ಯಾಯಾಲಯದ ನ್ಯಾಯಾಧೀಶರ ವೇತನವಾದ ರೂ. 80.000 ದಲ್ಲಿ ಈಗಾಗಲೇ ಪಡೆಯುತ್ತಿರುವ ಮೂಲ ನಿವೃತ್ತಿ ವೇತನವನ್ನು ಕಡಿತಗೊಳಿಸತಕ್ಕದ್ದು.

2. ಆತಿಥ್ಯ ಭತ್ಯೆ : Sumptuary Allowance ದಿನಾಂಕ : 1-9-2008 ರಿಂದ ಜಾರಿಗೆ ಬರುವಂತೆ ಮಾಸಿಕ ರೂ. 12.000/-

3. ತುಟ್ಟಿ ಭತ್ಯೆ : ಮನೆ ಬಾಡಿಗೆ ಭತ್ಯೆ : ಮೂಲ ವೇತನದಲ್ಲಿ ನಿವೃತ್ತಿ ವೇತನವನ್ನು ಕಳೆದು ಉಳಿಯುವ ಮೊತ್ತಕ್ಕೆ ಲಭ್ಯವಾಗುವ ತುಟ್ಟಿ ಭತ್ಯೆ/ಮನೆ ಬಾಡಿಗೆ ಭತ್ಯೆಗಳನ್ನು ನೀಡಬಹುದಾಗಿದೆ.

4. ರಜೆ ಮತ್ತು ಪ್ರಯಾಣ ರಿಯಾಯಿತಿ ಸೌಲಭ್ಯ : ಉಚ್ಚ ನ್ಯಾಯಾಲಯದ ನ್ಯಾಯಾಧೀಶರಿಗೆ ಲಭ್ಯವಾಗುವ ರೀತಿಯಲ್ಲಿ.

5. ವೈದ್ಯಕೀಯ ಸೌಲಭ್ಯ : ರಾಜ್ಯ ಸರ್ಕಾರದ ಅಧಿಕಾರಿಗಳಿಗೆ ಲಭ್ಯವಾಗುವ ದರದಲ್ಲಿ

ನೀರು ಮತ್ತು ವಿದ್ಯುಚ್ಛಕ್ತಿಯ ಬಿಲ್ ಮರುಪಾವತಿ ಹಾಗೂ ನಿವಾಸಕ್ಕೆ ಪೀಠೋಪಕರಣ ನೀಡಲು ಅವಕಾಶ ಇರುವುದಿಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 2175 ಸೇ-3/09, ದಿನಾಂಕ : 4-12-2009 ಹಾಗೂ ಆಇ 161 ವೆಚ್ಚ-5/10, ದಿನಾಂಕ : 20-2-2010ರಲ್ಲಿ ನೀಡಿರುವ ಅಭಿಪ್ರಾಯಗಳೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಬಿ. ಮನೋಹರ್)

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

ಪಿ.ಆರ್. 851

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ** : ವನ್ಯ ಜೀವಿ ಅಪರಾಧ ಪ್ರಕರಣಗಳಲ್ಲಿ ತನಿಖೆಗಳನ್ನು ಸಮನ್ವಯಗೊಳಿಸುವ ಸಲುವಾಗಿ ಬಂಡೀಪುರ, ನಾಗರಹೊಳೆ, ಭದ್ರಾ ಹಾಗೂ ದಾಂಡೇಲಿ ಅಣಶಿ ಹುಲಿ ಸಂರಕ್ಷಣಾ ಪ್ರದೇಶಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸಂಬಂಧಪಟ್ಟ ಸೂಪರಿಂಟೆಂಡೆಂಟ್ ಆಫ್ ಪೊಲೀಸ್‌ರನ್ನೊಳಗೊಂಡ ಇಬ್ಬರು ಸದಸ್ಯರ ಸಮಿತಿ ರಚಿಸುವ ಕುರಿತು.

**ಓದಲಾಗಿದೆ :)** 1) ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯ ಜೀವಿ) ಬೆಂಗಳೂರು ರವರ ಪತ್ರ ಸಂಖ್ಯೆ : ಬಿ/ವಜೀ/ಸಿಆರ್/61/2006-07, ದಿನಾಂಕ : 29-12-2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 29-12-2009ರ ಪತ್ರದಲ್ಲಿ ಅಪರ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳು (ವನ್ಯ ಜೀವಿ), ಇವರು ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯದಲ್ಲಿನ ಹುಲಿ ಸಂರಕ್ಷಣಾ ಚಾಲನಾ ಸಮಿತಿ ಸಭೆಯಲ್ಲಿ ವನ್ಯ ಜೀವಿ ಅಪರಾಧ ಪ್ರಕರಣಗಳನ್ನು ತನಿಖೆ ಮಾಡುವಲ್ಲಿ ಇರುವ ಲೋಪಗಳನ್ನು ಸರಿಪಡಿಸಲು ಹಾಗೂ ವನ್ಯಜೀವಿ ಸಂರಕ್ಷಣಾ ಕಾಯ್ದೆ 1972ರಲ್ಲಿ ಕಠಿಣ ಶಿಕ್ಷೆಗಳನ್ನು ನಿಗದಿ ಪಡಿಸಿದ್ದಾಗ್ಯೂ ಕೆಲವೊಂದು ಪೋಲೀಸ್ ಠಾಣೆಗಳಲ್ಲಿ ಇಂತಹ ಪ್ರಕರಣಗಳಲ್ಲಿ ನಿಯಮ ಉಪಬಂಧಗಳನ್ನು ನಮೂದಿಸುತ್ತಿಲ್ಲವಾದ್ದರಿಂದ ವನ್ಯಜೀವಿ ಅಪರಾಧ ಪ್ರಕರಣಗಳಲ್ಲಿ ತನಿಖೆಗಳನ್ನು ಸಮನ್ವಯಗೊಳಿಸುವ ಸಲುವಾಗಿ ರಾಜ್ಯದ ನಾಲ್ಕು ಹುಲಿ ಸಂರಕ್ಷಣಾ ಪ್ರದೇಶಗಳಿಗೆ ಸಂಬಂಧಿಸಿದಂತೆ ಆಯಾ ಸೂಪರಿಂಟೆಂಡೆಂಟ್ ಆಫ್ ಪೋಲೀಸ್ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು (ವನ್ಯ ಜೀವಿ) ಇವರನ್ನು ಒಳಗೊಂಡ ಇಬ್ಬರು ಸದಸ್ಯರ ಸಮಿತಿಯನ್ನು ರಚಿಸಲು ನಿರ್ಣಯ ಕೈಗೊಂಡಿದ್ದು, ರಾಜ್ಯದ ನಾಲ್ಕು ಹುಲಿ ಸಂರಕ್ಷಣಾ ಪ್ರದೇಶಗಳಾದ ಬಂಡೀಪುರ, ನಾಗರಹೊಳೆ, ಭದ್ರಾ ಹಾಗೂ ದಾಂಡೇಲಿ ಅಣಶಿ ಹುಲಿ ಸಂರಕ್ಷಣಾ ಪ್ರದೇಶಗಳ ಉಪ ಅರಣ್ಯ

ಸಂರಕ್ಷಣಾಧಿಕಾರಿಗಳು ಹಾಗೂ ಸಂಬಂಧಪಟ್ಟ ಸೂಪರಿಂಟೆಂಡೆಂಟ್ ಆಫ್ ಪೊಲೀಸ್‌ರನ್ನು ಒಳಗೊಂಡ ಇಬ್ಬರು ಸದಸ್ಯರ ಸಮಿತಿಯನ್ನು ರಚಿಸಲು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 23 ಎಫ್‌ಡಬ್ಲ್ಯೂಎಲ್ 2010, ಬೆಂಗಳೂರು, ದಿನಾಂಕ: 12–3–2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ವನ್ಯಜೀವಿ ಅಪರಾಧ ಪ್ರಕರಣಗಳಲ್ಲಿ ತನಿಖೆಗಳನ್ನು ಸಮನ್ವಯಗೊಳಿಸುವ ಸಲುವಾಗಿ ಬಂಡೀಪುರ, ನಾಗರಹೊಳೆ, ಭದ್ರಾ ಹಾಗೂ ದಾಂಡೇಲಿ ಅಣಶಿ ಹುಲಿ ಸಂರಕ್ಷಣಾ ಪ್ರದೇಶಗಳ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸಂಬಂಧಪಟ್ಟ ಸೂಪರಿಂಟೆಂಡೆಂಟ್ ಆಫ್ ಪೊಲೀಸರನ್ನೊಳಗೊಂಡ ಇಬ್ಬರು ಸದಸ್ಯರ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಪಿ.ಆರ್. ಕಲಾವತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ

ಪಿ.ಆರ್. 852

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ಬಾಗಲಕೋಟೆ ಜಿಲ್ಲೆ ಹಾಗೂ ತಾಲ್ಲೂಕು, ಮಲಪ್ರಭಾ ನದಿಗೆ ಅಡ್ಡಲಾಗಿ ಇಂಗಳಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸನೀಇ 06 ನಯೋಕಾ 2009, ದಿನಾಂಕ : 6–1–2010
2. ಪತ್ರ ಸಂಖ್ಯೆ : ಮುಇಂ/ಸನೀ (ಉ) ವಲಯ/ಬಿಜೆಪಿ/ಎಇ–6/2009–10/1857, ದಿನಾಂಕ 20–3–2010
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09–10, ದಿನಾಂಕ : 23–3–2010

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 6–1–2010ರ ಸರ್ಕಾರದ ಆದೇಶದಲ್ಲಿ ಆರ್.ಐ.ಡಿ.ಎಫ್–15ರಡಿ ಆಡಳಿತಾತ್ಮಕ ಅನುಮೋದನೆ ನೀಡಿರುವ 385 ಕಾಮಗಾರಿಗಳ ಪೈಕಿ 394.00 ಲಕ್ಷ ರೂ.ಗಳ ಅಂದಾಜಿನ ಬಾಗಲಕೋಟೆ ಜಿಲ್ಲೆ ಹಾಗೂ ತಾಲ್ಲೂಕು, ಮಲಪ್ರಭಾ ನದಿಗೆ ಅಡ್ಡಲಾಗಿ ಇಂಗಳಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಮಾಡುವ ಕಾಮಗಾರಿಯು ಸಹ ಒಂದಾಗಿದ್ದು, ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಅಲ್ಪಾವಧಿ ಇ–ಟೆಂಡರ್ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿನಾಂಕ : 19–2–10 |
| 2 | ವಿಜಯ ಕರ್ನಾಟಕ ದಿನಪತ್ರಿಕೆ | ದಿನಾಂಕ : 18–2–10 |

ಈ ಟೆಂಡರ್ ಕರೆಗೆ ಪ್ರತಿಕ್ರಿಯಿಸಿ ಒಬ್ಬ ಗುತ್ತಿಗೆದಾರರು ಮಾತ್ರ ನಿಗದಿತ ದಿನದಂದು ಇ–ಟೆಂಡರಿಂಗ್ ಮೂಲಕ ಭರ್ತಿ ಮಾಡಿದ ಟೆಂಡರ್‌ನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ಇವರ ತಾಂತ್ರಿಕ ಬಿಡ್ ಅರ್ಹವಾಗಿದ್ದರಿಂದ, ಇವರ ಆರ್ಥಿಕ ಬಿಡ್‌ನ್ನು ದಿನಾಂಕ 11–3–2010ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ವಿವರ ಕೆಳಕಂಡಂತಿದೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,55,37,254/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 3,56,29,270/– |

| ಕ್ರ.ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು | ರೂ. 3,75,64,386/– | 5.70 ಹೆಚ್ಚು | 5.43 ಹೆಚ್ಚು |

ಮೇಲ್ಕಂಡ ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.43ರಷ್ಟು ಹೆಚ್ಚಾಗಿದ್ದು, ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23–3–2010ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,56,29,270–00ಗಳ ಮೇಲೆ ಶೇಕಡ 5.43 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 3,75,63,939–00ಗಳಿಗೆ ಕಾಮಗಾರಿಯನ್ನು ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಅಪಿಬಂ 2010, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಾಗಲಕೋಟೆ ಜಿಲ್ಲೆ ಹಾಗೂ ತಾಲ್ಲೂಕು, ಮಲಪ್ರಭಾ ನದಿಗೆ ಅಡ್ಡಲಾಗಿ ಇಂಗಳಗಿ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿಯ ದರಗಳನ್ನು ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿ ಟೆಂಡರಿಗೆ ಇಡಲಾದ ಮೊತ್ತ ರೂ. 3,56,29,270–00ಗಳ ಮೇಲೆ ಶೇಕಡ 5.43ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 3,75,63,939–00ಗಳಿಗೆ (ಮೂರು ಕೋಟಿ ಎಪ್ಪತ್ತೈದು ಲಕ್ಷದ ಅರವತ್ತೂರು ಸಾವಿರದ ಒಂಭೈನೂರ ಮೂವತ್ತೊಂಬತ್ತು ರೂ.ಗಳು ಮಾತ್ರ) ಶ್ರೀ ಜಿ. ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20–1–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಕೆ. ಸುಧಾಕರ ಶೆಟ್ಟಿ)

ಸರ್ಕಾರದ ಉಪ ಕಾರ್ಯದರ್ಶಿ,

ಪಿ.ಆರ್. 853 ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ದಾವಣಗೆರೆ ಜಿಲ್ಲೆ ಹಾಗೂ ತಾಲ್ಲೂಕು ಕೊಡಗನೂರು ಕೆರೆ ಏರಿಯ ಕುಸಿದ ಭಾಗವನ್ನು ಯಥಾಸ್ಥಿತಿಗೆ ತರುವ ಕಾಮಗಾರಿಯ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ : ಮುಸದ/ತಾಂಸ–4/ಸಇಂ–10/ದಾವಣಗೆರೆ/ಕೊಡಗನೂರು/2009–10/518, ದಿನಾಂಕ : 11–2–2010.

**ಪ್ರಸ್ತಾವನೆ :**

ದಾವಣಗೆರೆ ಜಿಲ್ಲೆ ಹಾಗೂ ತಾಲ್ಲೂಕು ಕೊಡಗನೂರು ಕೆರೆ ಏರಿಯ ಕುಸಿದ ಭಾಗವನ್ನು ಯಥಾಸ್ಥಿತಿಗೆ ತರುವ ಕಾಮಗಾರಿಯ 2009–10ನೇ ಸಾಲಿಗೆ ಮುಂದುವರೆದ 2007–08ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾದ 266.00 ಲಕ್ಷ

ರೂ.ಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರು ಮೇಲೆ ಓದಲಾದ ದಿನಾಂಕ 11–2–2010ರ ಪತ್ರದಲ್ಲಿ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿದ್ದಾರೆ.

ಸದರಿ ಕೆರೆಯನ್ನು 1896ರಲ್ಲಿ ನಿರ್ಮಿಸಿದ್ದು, ಇದರ ಅಚ್ಚುಕಟ್ಟು 220 ಹೆಕ್ಟೇರ್. ಏರಿಯ ಉದ್ದ 1340 ಮೀ. ಕೆರೆಯ ಏರಿಯ ಗರಿಷ್ಠ ಎತ್ತರ 10.50 ಮೀ ಹಾಗೂ ಎಡ ಮತ್ತು ಬಲ ಕಾಲುವೆಗಳನ್ನು ಹೊಂದಿರುತ್ತದೆ. ಈ ಕೆರೆಯ ಏರಿಯನ್ನು ಮಂಡ್ಯ–ಹಡಗಲಿ ರಾಜ್ಯ ಹೆದ್ದಾರಿ ಭಾಗವಾಗಿ ಉಪಯೋಗಿಸಲಾಗುತ್ತಿದೆ. ಸದರಿ ಕೆರೆಯು 28 ವರ್ಷಗಳ ನಂತರ ಪ್ರಥಮ ಬಾರಿಗೆ ತುಂಬಿ ಹರಿದಿದೆ ಹಾಗೂ ಈ ಕೆರೆಯ ಏರಿಯ ಮೇಲೆ ರಾಜ್ಯ ಹೆದ್ದಾರಿಯಲ್ಲಿ ದಟ್ಟವಾದ ವಾಹನ ಸಂಚಾರವಿದ್ದು, ಏರಿಯ ಚೈ. 330 ಮೀ. ನಿಂದ 375 ಮೀ. ಭಾಗದಲ್ಲಿ ಕುಸಿತ ಉಂಟಾಗಿ ಬಿರುಕುಗಳಾಗಿರುತ್ತವೆ.

ಕುಸಿದಿರುವ ಏರಿಯ ಭಾಗದಲ್ಲಿ ಇನ್ನೂ ಕುಸಿತ ಉಂಟಾಗುತ್ತಿರುವುದಾಗಿ ವರದಿಯಾಗಿದ್ದು, ಈ ಭಾಗವನ್ನು ತಕ್ಷಣವೇ ಶಾಶ್ವತವಾಗಿ ದುರಸ್ತಿ ಮಾಡುವುದು ಅವಶ್ಯವಿರುತ್ತದೆ. ಸದರಿ ಕೆರೆಯನ್ನು ಶಾಶ್ವತವಾಗಿ ದುರಸ್ತಿಪಡಿಸಲು ರೂ. 266.00 ಲಕ್ಷ ಮೊತ್ತ ಅಂದಾಜಿಗೆ ಲೆಕ್ಕ ಶೀರ್ಷಿಕೆ "4702–00–101–7–01–139–ಕೆರೆಗಳ ಆಧುನೀಕರಣ" ಅಡಿ ಆಡಳಿತಾತ್ಮಕ ಅನುಮೋದನೆ ನೀಡಲು ಪರಿಗಣಿಸಲಾಗಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 01 ಕೆಜಿದು (ತಾಂತ್ರಿಕ) 2010, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ದಾವಣಗೆರೆ ಜಿಲ್ಲೆ ಹಾಗೂ ತಾಲ್ಲೂಕು ಕೊಡಗನೂರು ಕೆರೆ ಏರಿಯ ಕುಸಿದ ಭಾಗವನ್ನು ಯಥಾಸ್ಥಿತಿಗೆ ತರುವ 2009–10ನೇ ಸಾಲಿಗೆ ಮುಂದುವರೆದ 2007–08ನೇ ಸಾಲಿನ ದರಪಟ್ಟಿಯಂತೆ ತಯಾರಿಸಲಾದ 266.00 ಲಕ್ಷ ರೂ.ಗಳ (ಇನ್ನೂರ ಅರವತ್ತಾರು ಲಕ್ಷ ರೂ.ಗಳು ಮಾತ್ರ) ಅಂದಾಜು ಪಟ್ಟಿಗೆ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಆಡಳಿತಾತ್ಮಕ ಅನುಮೋದನೆ ನೀಡಿದೆ.

1. ಕಾಮಗಾರಿಯ ವೆಚ್ಚವು ಯಾವುದೇ ಕಾರಣಕ್ಕೂ ಅನುಮೋದಿಸಿದ ಟೆಂಡರ್ ಮೊತ್ತಕ್ಕಿಂತ ಹೆಚ್ಚಾಗಬಾರದು ಹಾಗೂ ಕಾಮಗಾರಿಯನ್ನು ಕಾಲಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.
2. ಒಂದುವೇಳೆ ಸ್ಥಳ ಪರಿಸ್ಥಿತಿಗೆ ಅನುಗುಣವಾಗಿ ಹೆಚ್ಚಳ ನಿರೀಕ್ಷಿಸಿದಲ್ಲಿ ತಕ್ಷಣವೇ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ಕಾಮಗಾರಿಯನ್ನು ಪೂರ್ಣಗೊಳಿಸತಕ್ಕದ್ದು.
3. ಕಾಮಗಾರಿ ಪ್ರಾರಂಭಿಸುವ ಮುನ್ನ ವಿನ್ಯಾಸ ಬದಲಾವಣೆಯಿಂದಾಗಿ ಅಥವಾ ಬೇರೆ ಕಾರಣದಿಂದ ಅನುಮೋದಿಸಿದ ಅಂದಾಜು ಮೊತ್ತ ಹೆಚ್ಚಾಗುವ ಸಂಭವ ಇದ್ದಲ್ಲಿ, ತಕ್ಷಣ ಪರಿಷ್ಕೃತ ಅಂದಾಜಿಗೆ ಸಕ್ಷಮ ಪ್ರಾಧಿಕಾರದಿಂದ ಅನುಮೋದನೆ ಪಡೆದು ನಂತರ ಕಾಮಗಾರಿಯನ್ನು ಪ್ರಾರಂಭಿಸುವುದು.
4. ಕಾಮಗಾರಿಯ ಅಂದಾಜು ಪಟ್ಟಿಗೆ ತಾಂತ್ರಿಕ ಮೌಲ್ಯ ನಿರ್ಣಯ ಸಮಿತಿ/ತಾಂತ್ರಿಕ ಸಮಿತಿಯ ತೀರುವಳಿ ಪಡೆಯುವುದು.
5. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999ರ ಅನುಸಾರ ಟೆಂಡರ್ ಕರೆದು ತೆಗೆದುಕೊಳ್ಳತಕ್ಕದ್ದು.
6. ಇ.ಐ.ಆರ್.ಎಲ್/ವರ್ಕ್‌ಸ್ಲಿಪ್‌ಗಳನ್ನು ಸಲ್ಲಿಸಬೇಕಾದಲ್ಲಿ ತಕ್ಷಣವೇ ಸಲ್ಲಿಸತಕ್ಕದ್ದು.
7. ತಾಂತ್ರಿಕ ಮಂಜೂರಾತಿಯನ್ನು ನೀಡುವ ಮೊದಲು ಅಂದಾಜನ್ನು ಮತ್ತೊಮ್ಮೆ ವಿವರವಾಗಿ ಪರಿಶೀಲಿಸುವುದು.
8. ಕೆರೆಯ ಏರಿಯ ಮೇಲೆ ಲೋಕೋಪಯೋಗಿ ಇಲಾಖೆಯ ರಸ್ತೆ ಹಾದು ಹೋಗುವ ಕಾರಣ, ರಸ್ತೆ ನಿರ್ಮಾಣದ ತಾಂತ್ರಿಕ ಅಂಶವನ್ನು ಪಡೆದು ಅದಕ್ಕನುಗುಣವಾಗಿ ಏರಿಯ ಬಲವರ್ಧನೆಗೆ ಕ್ರಮ ಕೈಗೊಳ್ಳತಕ್ಕದ್ದು ಹಾಗೂ ಇದಕ್ಕಾಗಿ ತಗಲುವ ಹೆಚ್ಚುವರಿ ವೆಚ್ಚವನ್ನು ಲೋಕೋಪಯೋಗಿ ಇಲಾಖೆಯಿಂದ ಕೊಳ್ಳುವ ಬಗ್ಗೆ ಕ್ರಮ ಕೈಗೊಳ್ಳುವುದು.
9. ಈ ಕಾಮಗಾರಿಯನ್ನು 2010–11ನೇ ಸಾಲಿನ ಆಯವ್ಯಯದಲ್ಲಿ ಸೂಕ್ತ ಅನುದಾನದೊಂದಿಗೆ ಸೇರಿಸಲು ಕ್ರಮ ಕೈಗೊಳ್ಳತಕ್ಕದ್ದು.

ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ " 4702–00–101–7–01–139–ಕೆರೆಗಳ ಆಧುನೀಕರಣ (ಯೋಜನೆ) ಅಡಿ ಭರಿಸುವುದು.

ಈ ಆದೇಶವನ್ನು ಇಲಾಖಾ ಕಾರ್ಯದರ್ಶಿಗಳಿಗೆ ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16–5–08ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
(ಕೆ. ಸುಧಾಕರ ಶೆಟ್ಟಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 854

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೆ: ಗಂಗಾವತಿ ಸಕ್ಕರೆ ಕಾರ್ಖಾನೆ (ನಿ) ಗಂಗಾವತಿ ಕೊಪ್ಪಳ ಜಿಲ್ಲೆ ಮುಚ್ಚಲಾಗಿರುವ ಈ ಕಾರ್ಖಾನೆಯ ಕಾರ್ಮಿಕರಿಗೆ ಬಾಕಿ ಇರುವ ವೇತನ ಮತ್ತು ಇತರೆ ಭತ್ಯೆಗಳನ್ನು KSIIDC ಮೂಲಕ ಪಾವತಿಸುವ ಸಲುವಾಗಿ KSIIDCಗೆ ಸಾಲವಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಿಐ 86 ಎಸ್‌ಜಿಎಫ್ 2004 ದಿನಾಂಕ : 17-09-2004.

2. ಗಂಗಾವತಿ ಸಕ್ಕರೆ ಕಾರ್ಖಾನೆಯ ಕಛೇರಿ ಆದೇಶ ಸಂಖ್ಯೆ : MD/GLN D/M/PMA/CLOSURE OF FACTORY/457 to 831/832/843-04-05 ದಿನಾಂಕ : 22-01-2005.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿರುವ ಸರ್ಕಾರದ ಅದೇಶದಲ್ಲಿ ಮೆ: ಗಂಗಾವತಿ ಸಕ್ಕರೆ ಕಾರ್ಖಾನೆ (ನಿ) ಗಂಗಾವತಿ ಕೊಪ್ಪಳ ಜಿಲ್ಲೆ ಈ ಕಾರ್ಖಾನೆಯನ್ನು ದಿನಾಂಕ : 17-09-2004ರಿಂದ ಮುಚ್ಚಲಾಗಿದ್ದು, ದಿನಾಂಕ : 31-05-2005 ರಲ್ಲಿ ಗೌರವಾನ್ವಿತ ಉಚ್ಚನ್ಯಾಯಾಲಯವು ಕಾರ್ಖಾನೆಗೆ Official Liquidator ರವರ ನೇಮಕ ಮಾಡಿದ್ದು, ಪ್ರಸ್ತುತ ಈ ಕಾರ್ಖಾನೆಯು ಗೌ. ಉಚ್ಚನ್ಯಾಯಾಲಯವು ನೇಮಕ ಮಾಡಿರುವ Official Liquidator ರವರ ವಶದಲ್ಲಿರುತ್ತದೆ.

ಕಾರ್ಖಾನೆಯನ್ನು ಮುಚ್ಚುವ ಸಮಯದಲ್ಲಿ 210 ಖಾಯಂ ಸಿಬ್ಬಂದಿ ಮತ್ತು 173 ಮಂದಿ Seasonal Employees ರವರು ಸೇರಿ ಒಟ್ಟು 383 ಕಾರ್ಮಿಕರು ಕಾರ್ಯ ನಿರ್ವಹಿಸುತ್ತಿದ್ದು ಇವರುಗಳನ್ನು ಮೇಲೆ ಓದಲಾದ (2)ರಲ್ಲಿರುವ ಕಾರ್ಖಾನೆಯ ಕಛೇರಿ ಆದೇಶ ದಿನಾಂಕ : 22-01-05ರ ಆದೇಶದಲ್ಲಿ Industrial Dispute Act 1947 ರಲ್ಲಿನ ಸೆಕ್ಷನ್ 25(0) ಸಬ್‌ಸೆಕ್ಷನ್ 8ರ ಪ್ರಕಾರ ಸೇವೆಯಿಂದ Retrench ಮಾಡಿರುತ್ತದೆ.

ಮೆ: ಗಂಗಾವತಿ ಸಕ್ಕರೆ ಕಾರ್ಖಾನೆಯನ್ನು ಮುಚ್ಚುವ ದಿನಾಂಕದವರೆವಿಗೆ ಕಾರ್ಖಾನೆಯ ಕಾರ್ಮಿಕರಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ಪಾವತಿಸಬೇಕಾಗಿದ್ದು, ಕಾರ್ಖಾನೆಯ ಕಾರ್ಮಿಕರು ಆರ್ಥಿಕವಾಗಿ ಸಂಕಷ್ಟದಲ್ಲಿದ್ದು, ಕಾರ್ಮಿಕರುಗಳಿಗೆ ನೀಡಬೇಕಾದ ಗ್ರಾಚ್ಯುಟಿ ಹಾಗೂ ಬಾಕಿ ಇರುವ ವೇತನದ ಹಣ ಅಂದಾಜು 3.75 ಕೋಟಿ ರೂ.ಗಳನ್ನು ಮಾನವೀಯತೆಯ ದೃಷ್ಟಿಯಿಂದ ನೀಡಲು ಉದ್ದೇಶಿಸಿ ಈ ಹಣವನ್ನು ಮೊದಲಿಗೆ ಸರ್ಕಾರದಿಂದ KSIIDC ಗೆ ಹಣ ಸಾಲವಾಗಿ ಒದಗಿಸಿ ನಂತರ KSIIDC ಯು ಜಿಲ್ಲಾಧಿಕಾರಿ ರವರ ಮುಖಾಂತರ ವಿತರಿಸಲು ಹಾಗೂ ಒದಗಿಸಲಾದ ಈ ಹಣವನ್ನು ಕಾರ್ಖಾನೆಯ ಮಾರಾಟದ ನಂತರ KSIIDC ಯು Official Liquidator ರವರ ಮೂಲಕ ಕಾರ್ಮಿಕರ ಪರವಾಗಿ ವಸೂಲು ಮಾಡಿಕೊಳ್ಳಲು ನಿರ್ಧರಿಸಿ ಮುಚ್ಚಲಾಗಿರುವ ಈ ಕಾರ್ಖಾನೆಯ ಕಾರ್ಮಿಕರ ವೇತನ ಮತ್ತು ಇತರೆ ಭತ್ಯೆಗಳ ಪಾವತಿಗಾಗಿ 3.75 ಕೋಟಿ ರೂ.ಗಳನ್ನು KSIIDCಗೆ ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನ ತೆಗೆದುಕೊಂಡು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಐ 284 ಎಸ್‌ಜಿಎಫ್ 2005, ಬೆಂಗಳೂರು, ದಿನಾಂಕ 26ನೇ ಮಾರ್ಚಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಮೆ: ಗಂಗಾವತಿ ಸಕ್ಕರೆ ಕಾರ್ಖಾನೆ (ನಿ) ಗಂಗಾವತಿ ಕೊಪ್ಪಳ ಜಿಲ್ಲೆ ಈ ಕಾರ್ಖಾನೆಯನ್ನು ದಿನಾಂಕ : 17-09-04 ರಿಂದ ಮುಚ್ಚಲಾಗಿದ್ದು, ಹಾಗೂ Industrial Disputes Act 1947 ರಲ್ಲಿನ ಸೆಕ್ಷನ್ 25 (0) ಸಬ್ ಸೆಕ್ಷನ್ 8ರ ಪ್ರಕಾರ ಕಾರ್ಖಾನೆಯ ಸೇವೆಯಿಂದ Retrench ಮಾಡಲಾಗಿರುವ 210 ಖಾಯಂ ಸಿಬ್ಬಂದಿ ಮತ್ತು 173 ಮಂದಿ Seasonal Employees ಗಳು ಸೇರಿ ಒಟ್ಟು 383 ಕಾರ್ಮಿಕರಿಗೆ ಅವರುಗಳಿಗೆ ಪಾವತಿಸಲು ಬಾಕಿ ಇರುವ ವೇತನ ಮತ್ತು ಇತರೆ ಭತ್ಯೆಗಳನ್ನು KSIIDC ಯು ಜಿಲ್ಲಾಧಿಕಾರಿ ರವರ ಮುಖಾಂತರ ವಿತರಿಸಲು 3.75 ಕೋಟಿ ರೂ.ಗಳನ್ನು (ಮೂರು ಕೋಟಿ ಎಪ್ಪತ್ತೈದು ಲಕ್ಷ ರೂ.ಗಳು ಮಾತ್ರ) ಸರ್ಕಾರದಿಂದ KSIIDC ಗೆ ಸಾಲವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಬಿಡುಗಡೆ ಮಾಡಲಾದ ಈ ಹಣವನ್ನು ಜಿಲ್ಲಾಧಿಕಾರಿ ಕೊಪ್ಪಳ ರವರ ಮೂಲಕ ಕಾರ್ಖಾನೆಯ ಕಾರ್ಮಿಕರಿಗೆ ವಿತರಿಸಲು KSIIDC ಯು ಕ್ರಮವಹಿಸುವುದು.

ಕಾರ್ಖಾನೆಗೆ ನೇಮಕಗೊಂಡಿರುವ Official Liquidator ರವರು ಈ ಕಾರ್ಖಾನೆಯನ್ನು ಮಾರಾಟ ಮಾಡಿದ ನಂತರ ಕಾರ್ಮಿಕರ ವೇತನ/ಭತ್ಯೆಗಳ ಪಾವತಿಗಾಗಿ ಬಿಡುಗಡೆಗೊಳಿಸಲಾದ ಈ ಹಣವನ್ನು KSIIDC ಯು Official Liquidator ರವರಿಂದ ವಸೂಲಿ ಮಾಡಿಕೊಂಡು ಸರ್ಕಾರಕ್ಕೆ ಮರುಪಾವತಿಸುವುದು.

2009-10ನೇ ಸಾಲಿನಲ್ಲಿನ ಪೂರಕ ಅಂದಾಜುಗಳ (ಎರಡನೇಯ ಹಾಗೂ ಅಂತಿಮ ಕಂತು) ಲೆಕ್ಕ ಶೀರ್ಷಿಕೆ 6860-04-190-1-03 (ಯೋಜನೇತರ) 394 ಸಾಲಗಳು ಅಡಿಯಲ್ಲಿ 3.75 ಕೋಟಿ ರೂ.ಗಳನ್ನು ಹೆಚ್ಚುವರಿಯಾಗಿ ಒದಗಿಸಲಾಗಿದ್ದು, ಈ ಹಣವನ್ನು ಬಿಡುಗಡೆಗೆ ಮಂಜೂರು ಮಾಡಲಾಗಿದೆ.

ಹಣ ಸೆಳೆಯುವ ಅಧಿಕಾರಿ ವ್ಯವಸ್ಥಾಪಕ ನಿರ್ದೇಶಕರು, KSIIDC ರವರು ಆಗಿದ್ದು, ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ರುಜು ಪಡೆದು ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 1935 ವೆಚ್ಚ-1/09 ದಿನಾಂಕ : 15-12-2009 ಮತ್ತು ಎಫ್‌ಡಿ 273 ವೆಚ್ಚ-1/2010 ದಿನಾಂಕ : 18-02-10 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ಪಿ.ಆರ್.861 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

ಸಂಖ್ಯೆ : ಸಿಐ 298 ಎಸ್‌ಜಿಎಫ್ 2008, ಬೆಂಗಳೂರು, ದಿನಾಂಕ : 23-03-2010

### ತಿದ್ದುಪಡಿ

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ಸಕ್ಕರೆ ವರ್ಷ 2006-07ರ ಸಾಲಿಗೆ ವಿಶೇಷ ನೆರವು.

ಸರ್ಕಾರದ ಆದೇಶ ಸಂಖ್ಯೆ ಸಿಐ 298 ಎಸ್‌ಜಿಎಫ್ 2008 ದಿನಾಂಕ : 05-01-2010ರಲ್ಲಿನ ಪುಟ-2ರಲ್ಲಿರುವ ಅದೇಶ ಭಾಗದ ಕ್ರಮ ಸಂಖ್ಯೆ (4) ರಲ್ಲಿರುವ ಬನ್ನಾರಿ ಅಮ್ಮನ್ ಶುಗರ್ಸ್ (ಲಿ) ನಂಜನಗೂಡು ಈ ಕಾರ್ಖಾನೆಗೆ ಸಂಬಂಧಿಸಿದಂತೆ ಕಾರ್ಖಾನೆಗಳಿಂದ ಸರ್ಕಾರಕ್ಕೆ ಬರಬೇಕಾದ ಬಾಕಿ ಮೊತ್ತ ಕಲಂನಲ್ಲಿ 55,11,000/- ರೂ.ಗಳನ್ನು ಸೇರ್ಪಡೆಗೊಳಿಸಿ ಒಟ್ಟು 1,66,90,000/- ರೂ.ಗಳ ಬದಲಿಗೆ 2,22,01,000/- ರೂ.ಗಳೆಂದು ಹಾಗೂ "ನಿವ್ವಳ ಕಾರ್ಖಾನೆಗಳಿಗೆ ಬಿಡುಗಡೆ ಮೊತ್ತ/ ಜಿಲ್ಲಾಧಿಕಾರಿಗಳು" ಕಲಂನಲ್ಲಿ ಕ್ರಮ ಸಂಖ್ಯೆ (4) ರಲ್ಲಿರುವ "55,11,000/- ರೂ.ಗಳು (ಜಿಲ್ಲಾಧಿಕಾರಿ ಮೈಸೂರು)" ಎಂಬುದನ್ನು ತೆಗೆದು ಹಾಕಲಾಗಿದ್ದು, ಒಟ್ಟು 75,91,000/- ರೂ.ಗಳ ಬದಲಿಗೆ 20,80,000/- ರೂ.ಗಳೆಂದು ತಿದ್ದಿ ಓದಿಕೊಳ್ಳುವುದು.

ಹಾಗೂ ಪುಟ-3ರಲ್ಲಿರುವ ಕಂಡಿಕೆ (1) ರಲ್ಲಿನ 2ನೇ ಸಾಲಿನಲ್ಲಿರುವ 1,66,90,000/- ರೂ. ಬದಲಿಗೆ 2,22,01,000/- ರೂ.ಗಳೆಂದು ಹಾಗೂ ಕಂಡಿಕೆ (3) ರಲ್ಲಿರುವ 75,91,000/- ರೂ.ಗಳನ್ನು ಜಿಲ್ಲಾಧಿಕಾರಿ ಮೈಸೂರು ಮತ್ತು ರಾಮನಗರ ರವರಿಗೆ ಎಂಬುದರ ಬದಲಿಗೆ "20,80,000/- ರೂ.ಗಳನ್ನು ಜಿಲ್ಲಾಧಿಕಾರಿ ರಾಮನಗರ" ಎಂದು ಮಾತ್ರ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದಕುಮಾರ್**

ಪೀಠಾಧಿಕಾರಿ (ಸಕ್ಕರೆ)

ಪಿ.ಆರ್.862 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಶ್ರೀ ಎಸ್. ಆರ್. ನಿಡಗುಂದಿ, ಉಪನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಕಾರವಾರ ಮತ್ತು ಶ್ರೀ ಎಂ.ಪಿ. ಇಟ್ನಾಳ್, ಹಿರಿಯ ಭೂಭೌತ ವಿಜ್ಞಾನಿ, ಗಣಿ ಮತ್ತು ಭೂ ವಿಜ್ಞಾನ ಇಲಾಖೆ ಕಾರವಾರ, ಇವರುಗಳನ್ನು ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ :** 1. ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಇವರ ಪತ್ರ ಸಂಖ್ಯೆ : ಗಭೂಇ/ ಸಿಬ್ಬಂದಿ-ಅ-3/ಶಿಸ್ತು/2009-10/4743, ದಿನಾಂಕ : 02-03-2010.

**ಪ್ರಸ್ತಾವನೆ :**

ಉತ್ತರ ಕನ್ನಡ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ತಿನ್ನೇಘಾಟ್ ವಲಯದಲ್ಲಿನ 10 ಸ್ಥಳಗಳಲ್ಲಿ ಅನಧಿಕೃತವಾಗಿ ಸಂಗ್ರಹಿಸಲಾಗಿದ್ದ ಕಬ್ಬಿಣದ ಅದಿರನ್ನು ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಅಧಿಕಾರಿಗಳು ದಿ : 27-07-06 ಮತ್ತು 28-07-06ರಂದು ಜಪ್ತಿ ಮಾಡಿಕೊಂಡಿದ್ದು, ಸದರಿ ಅದಿರನ್ನು ಎಂ.ಎಂ. (ಡಿ&ಆರ್) ಕಾಯ್ದೆ, 1957ರ ಸೆಕ್ಷನ್ 21 ರ ಪ್ರಕಾರ ಹರಾಜು ಮಾಡಲು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾಂಡೇಲಿ ಇಲ್ಲಿ ಮೊಕದ್ದಮೆ ದಾಖಲಿಸಲಾಗಿದ್ದು, ಮಾನ್ಯ

ನ್ಯಾಯಾಲಯವು ದಿ : 19–12–09 ರಂದು ನೀಡಿದ ಆದೇಶದಲ್ಲಿ ಜಪ್ತಿ ಮಾಡಿದ್ದ ಅದಿರನ್ನು ಹರಾಜು ಮಾಡಲು ಆದೇಶಿಸಿದ್ದು, ಮಾನ್ಯ ನ್ಯಾಯಾಲಯದ ಆದೇಶದಂತೆ ವಶಪಡಿಸಿಕೊಂಡಿರುವ ಅದಿರನ್ನು ಹರಾಜು ಮಾಡಲು ಪತ್ರಿಕಾ ಪ್ರಕಟಣೆಯನ್ನು ಹೊರಡಿಸುವಂತೆ ಉಪನಿರ್ದೇಶಕರು, ಕಾರವಾರ, ಇವರಿಗೆ ಸೂಚಿಸಿದ್ದರೂ ಸಹ ಯಾವುದೇ ಕ್ರಮವನ್ನು ತೆಗೆದುಕೊಂಡಿರುವುದಿಲ್ಲ ಎಂದು ಹಾಗೂ ಜಪ್ತಿ ಮಾಡಿ ಅದಿರು ದಾಸ್ತಾನು ಮಾಡಿದ್ದ ಸ್ಥಳಗಳನ್ನು ಪರಿಶೀಲಿಸಿ ವಿಚಾರಣೆ ನಡೆಸಿದ್ದು, ಸದರಿ ಸ್ಥಳದಲ್ಲಿ ಅದಿರು ಇಲ್ಲದಿರುವ ಬಗ್ಗೆ ಸಂಶಯಪಟ್ಟು, ಇದಕ್ಕೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕಾರವಾರ ಕಛೇರಿಯ ಅಧಿಕಾರಿ–ಸಿಬ್ಬಂದಿಯವರೇ ನೇರ ಜವಾಬ್ದಾರರಾಗಿರುವುದು ಕಂಡುಬಂದಿರುತ್ತದೆಂದು ತಿಳಿಸುತ್ತಾ, ಇದಕ್ಕೆ ಕಾರಣ ಕರ್ತರಾದ ಶ್ರೀ ಎಸ್.ಆರ್.ನಿಡಗುಂದಿ, ಉಪನಿರ್ದೇಶಕರು, ಕಾರವಾರ ಹಾಗೂ ಶ್ರೀ ಎಂ.ಪಿ. ಇಟ್ನಾಳ್, ಹಿರಿಯ ಭೂ ಭೌತ ವಿಜ್ಞಾನಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕಾರವಾರ, ಇವರುಗಳನ್ನು ಕೂಡಲೇ ಅಮಾನತ್ತುಪಡಿಸಲು ಅಥವಾ ವರ್ಗಾವಣೆ ಮಾಡಲು ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಇವರು ತಮ್ಮ ದಿ : 15–02–2010 ಮತ್ತು 24–02–2010 ಪತ್ರಗಳಲ್ಲಿ ತಿಳಿಸಿರುತ್ತಾರೆಂದು ನಿರ್ದೇಶಕರು ವರದಿ ಮಾಡಿರುತ್ತಾರೆ. ಹಾಗೆಯೇ, ದಾಸ್ತಾನು ಮಾಡಲಾಗಿದ್ದ 3,15,200 ಮೆ.ಟನ್ ಕಬ್ಬಿಣದ ಅದಿರನ್ನು ಅನಧಿಕೃತವಾಗಿ ಸಾಗಾಣಿಕೆ ಮಾಡುತ್ತಿದ್ದರೂ ಸಹ ಇದನ್ನು ತಡೆಗಟ್ಟಲು ಯಾವುದೇ ರೀತಿಯ ಕ್ರಮವನ್ನು ತೆಗೆದುಕೊಂಡಿರುವುದಿಲ್ಲವೆಂದು ಹಾಗೂ ಅನಧಿಕೃತ ಸಾಗಣಿಕೆದಾರರ ವಿರುದ್ಧ ಕ್ರಿಮಿನಲ್ ಮೊಕದ್ದಮೆಗಳನ್ನೂ ಸಹ ದಾಖಲಿಸದೇ, ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಕಾರವಾರ ಜಿಲ್ಲೆಯ ಉಪನಿರ್ದೇಶಕರಾದ ಶ್ರೀ ಎಸ್. ಆರ್. ನಿಡಗುಂದಿ ಮತ್ತು ಹಿರಿಯ ಭೂಭೌತ ವಿಜ್ಞಾನಿಯಾದ ಶ್ರೀ ಎಂ.ಪಿ.ಇಟ್ನಾಳ್, ಇವರುಗಳು ಅನಧಿಕೃತ ಸಾಗಾಣಿಕೆದಾರರೊಂದಿಗೆ ಶಾಮೀಲಾಗಿರುವುದು ಕಂಡು ಬಂದಿರುತ್ತದೆ ಎಂದು ಮತ್ತು ಸರ್ಕಾರಿ ಕಾರ್ಯ ನಿರ್ವಹಿಸುವಲ್ಲಿ ನಿರ್ಲಕ್ಷತೆ ತೋರಿರುವುದಲ್ಲದೇ ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಹಾಗೂ ಇವರ ನಿರ್ಲಕ್ಷ್ಯತೆಯಿಂದ 3,15,200 ಮೆಟ್ರಿಕ್ ಟನ್‌ಗಳಿಗೆ ತಗಲುವ ಅಂದಾಜು ಮೌಲ್ಯ ರೂ. 13.16 ಕೋಟಿಗಳಷ್ಟು ಸರ್ಕಾರದ ಬೊಕ್ಕಸಕ್ಕೆ ನಷ್ಟವುಂಟಾಗಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವ ಪ್ರಯುಕ್ತ, ಸದರಿ ಅಧಿಕಾರಿಗಳನ್ನು ತಕ್ಷಣದಿಂದ ಸೇವೆಯಿಂದ ಅಮಾನತ್ತುಗೊಳಿಸಲು ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಇವರು ಮೇಲೆ ಓದಲಾದ (1) ರ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ : ಸಿಐ 19 ಎಂಜಿಎಸ್ 2010, ಬೆಂಗಳೂರು, ದಿನಾಂಕ 24ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಮೇರೆಗೆ, ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕಾರವಾರ ಮತ್ತು ಶ್ರೀ ಎಂ.ಪಿ. ಇಟ್ನಾಳ್, ಹಿರಿಯ ಭೂಭೌತ ವಿಜ್ಞಾನಿ, ಉಪನಿರ್ದೇಶಕರ ಕಛೇರಿ, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಕಾರವಾರ, ಇವರುಗಳ ವಿರುದ್ಧದ ಆರೋಪಗಳ ಕುರಿತು ವಿಚಾರಣೆಯನ್ನು ಕಾಯ್ದಿರಿಸಿ, ಈ ಇಬ್ಬರು ಅಧಿಕಾರಿಗಳನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ) ರ ಪ್ರಕಾರ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಕಾರವಾರ ಮತ್ತು ಶ್ರೀ ಎಂ.ಪಿ. ಇಟ್ನಾಳ್, ಹಿರಿಯ ಭೂಭೌತ ವಿಜ್ಞಾನಿ, ಉಪನಿರ್ದೇಶಕರ ಕಛೇರಿ, ಕಾರವಾರ, ಇವರುಗಳು ನಿಯಮಗಳ ಪ್ರಕಾರ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಸ್.ಆರ್. ನಿಡಗುಂದಿ, ಉಪನಿರ್ದೇಶಕರು, ಕಾರವಾರ ಮತ್ತು ಶ್ರೀ ಎಂ.ಪಿ. ಇಟ್ನಾಳ್, ಹಿರಿಯ ಭೂಭೌತ ವಿಜ್ಞಾನಿ, ಉಪನಿರ್ದೇಶಕರ ಕಛೇರಿ, ಕಾರವಾರ, ಇವರುಗಳು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯವರ ಲಿಖಿತ ಅನುಮತಿ ಪಡೆಯದೆ, ಕೇಂದ್ರ ಕಾರ್ಯಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಪಿ. ರಾಮಕೃಷ್ಣ**
ಪೀಠಾಧಿಕಾರಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.863

## COMMERCE AND INDUSTRIES SECRETARIAT

**Sub :** Approval of incentives and concessions to the Project Proposal of M/s. Zawar Cement Pvt. Ltd., for its modernisation/upgradation of the existing Cement Plant from Wet Process to Dry Process, at Shahabad Village, Chittapur Taluk Gulbarga District.

**Read :** 1. Govt. Order No. CI 286 SPI 2009 dated : 19-02-2010.

2. Company's Letter dated : 02-03-2010

**Preamble:**

M/s. Zawar Cement Pvt. Ltd, has taken over the closed unit M/s. HMP Cements Ltd., Shahabad (unit of M/s. Global Cements Ltd.,) through auction from DRT and proposes to modernise/upgrade the existing Cement Plant from Wet Process to Dry Process, at Shahabad Village, Chittapur Taluk, Gulbarga District, with an investment of Rs. 180 crores, generating employment to about 570 persons.

Their proposal was cleared in the 20th State High Level Clearance Committee (SHLCC) meeting held on 05-01-2010 and Government Order read at (1) above was issued.

In the G.O. read at (1) above it was mentioned that special incentives and concessions will be decided later. As the proposed new investment is less than Rs. 250 crores, the special incentive and concessions cannot be sanctioned to the unit. However the company's proposal to change the Cement Plant from Wet Process to Dry Process can be considered as modernization/upgradation of technology and is eligible for incentives and concessions under New Industrial Policy 2009-14.

The company vide at (2) read above has requested for the incentives and concessions as per the New Industrial Policy 2009-14.

Hence the following order :

**Government Order No. CI 286 SPI 2009, Bangalore, Dated 23Rd March 2010**

Government is pleased to accord in principle approval for the project proposal of M/s.Zawar Cement Pvt. Ltd., for modernization/upgradation of the existing Cement Plant from Wet Process to Dry Process, at Shahabad Village, Chittapur Taluk, Gulbarga District, with an investment of Rs. 180 crores, generating employment to about 570 persons and extend the incentives and concessions as per the New Industrial Policy 2009-14.

Other terms and conditions of G.O.CI 286 SPI 2009 dated : 19-02-2010 for this investment stand unaltered.

By Order and in the name of the Governor of Karnataka,

**Aparna Pavate,**

Desk Officer (Technical Cell),

PR. 864 Commerce & Industries Department

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ–2010 ಕಾರ್ಯಕ್ರಮಕ್ಕೆ ಸಂಬಂಧಿಸಿದಂತೆ, ಅನುದಾನ ಮಂಜೂರಾತಿ ಹಾಗೂ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ ಹಾಗೂ ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಪ್ರಸ್ತಾವನೆ.

2. ಅನಧಿಕೃತ ಟಿಪ್ಪಣಿ ಸಂಖ್ಯೆ : ಸಿಐ 198 ಎಸ್‌ಪಿಐ 2009, ದಿನಾಂಕ : 15–02–2010

3. ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 351 ಇಎಕ್ಸ್‌ಪಿ 2010, ದಿನಾಂಕ : 18–03–2010

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ – 2010 ವನ್ನು ಬೆಂಗಳೂರಿನಲ್ಲಿ ಜೂನ್ 3 ಹಾಗೂ 4, 2010 ರಂದು ನಡೆಸಲು ಉದ್ದೇಶಿಸಿದೆ. 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆಯಲ್ಲಿ ಅನುದಾನವನ್ನು ಮಂಜೂರು ಮಾಡಿ ಬಿಡುಗಡೆಗಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಉಲ್ಲೇಖ (1) ರಂತೆ ಸಲ್ಲಿಸಿರುತ್ತಾರೆ.

2009-10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆಯಲ್ಲಿ ಎಂಪಿಕ್ ಅನ್ವಯ ರೂ. 400 ಲಕ್ಷಗಳ ಅನುದಾನ ಹಂಚಿಕೆಯಾಗಿರುತ್ತದೆ. ಅದರಲ್ಲಿ ರೂ. 295 ಲಕ್ಷಗಳು (ಎರಡು ನೂರ ತೊಂಬತ್ತೈದು ಲಕ್ಷ ರೂಪಾಯಿಗಳು ಮಾತ್ರ) ಈಗಾಗಲೇ ಬಿಡುಗಡೆ ಮಾಡಲಾಗಿದೆ. ಮೇಲೆ ಓದಿದ (1) ರಂತೆ ಬಾಕಿ ಉಳಿದ ಹಣ ಬಿಡುಗಡೆ ಮಾಡಲು ಆಯುಕ್ತರು ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 198 ಎಸ್‌ಪಿಐ 2009, ಬೆಂಗಳೂರು, ದಿನಾಂಕ 22ನೇ ಮಾರ್ಚಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ – 2010 ಕಾರ್ಯಕ್ರಮಕ್ಕೆ ರೂ. 104.50 ಲಕ್ಷಗಳ ಅನುದಾನವನ್ನು ಈಗ ಮಂಜೂರಾತಿ ನೀಡಿ ಬಿಡುಗಡೆ ಮಾಡಲಾಗಿದೆ.

ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು, ರವರು ಸ್ವೀಕೃತೀಯ ರಶೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ರವರ ಮೇಲು ರುಜುವನ್ನು ಪಡೆದು ಸದರಿ ಅನುದಾನವನ್ನು ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇವರಿಂದ ನಗದಿಕರಿಸಲು ಆದೇಶಿಸಲಾಗಿದೆ.

ಸದರಿ ಮೊತ್ತವನ್ನು 2009-10ನೇ ಸಾಲಿನ ಆಯವ್ಯಯದ ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆಯ ಲೆಕ್ಕ ಶೀರ್ಷಿಕೆ 2852-80-800-0-46 ರಲ್ಲಿ ಭರಿಸುವುದು.

ಆರ್ಥಿಕ ಇಲಾಖೆಯ ಅನುಮೋದನೆ ಸಂಖ್ಯೆ : FD/351/EXP-I/2010 Date : 18-03-2010 ರನ್ವಯ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಪರ್ಣ ಪಾವಟೆ**

ಪೀಠಾಧಿಕಾರಿ (ತಾ.ಕೋ.)

ಪಿ.ಆರ್.865 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** 2009-10ನೇ ಸಾಲಿನಲ್ಲಿ ಆಹಾರ ಫಾರ್ಕ್ ಯೋಜನೆ ಅನುಷ್ಠಾನಕ್ಕೆ 4ನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಸಿಐ 352 ಎಸ್‌ಪಿಐ 2008, ಬೆಂಗಳೂರು ದಿನಾಂಕ : 20-11-2009
2. ವಿಶೇಷಾಧಿಕಾರಿಗಳು, ಆಹಾರ ಕರ್ನಾಟಕ ಲಿ., ಇವರ ಪತ್ರ ಸಂಖ್ಯೆ : FKL/356/2009-10, ದಿ : 30-01-2010.
3. ಆಯುಕ್ತರ ಪತ್ರ ಸಂಖ್ಯೆ : ಎಂಎಸ್‌ಎಂಇ/ಎಸ್I/ಆಹಾರ ಪಾರ್ಕ್/17/2009-10, ದಿನಾಂಕ : 30-01-2010.

**ಪ್ರಸ್ತಾವನೆ :**

ವಿಶೇಷಾಧಿಕಾರಿಗಳು ಆಹಾರ ಕರ್ನಾಟಕ ಲಿ., ಅವರು ರಾಜ್ಯದಲ್ಲಿ ಆಹಾರ ಪಾರ್ಕ್ ಯೋಜನೆ ಅನುಷ್ಠಾನಕ್ಕಾಗಿ 4ನೇ ಕಂತಿನ ಹಣ ರೂ. 386.25 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. 2009-10ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4851-00-800-5-00 ಅಡಿಯಲ್ಲಿ ಒಟ್ಟು 772.50 ಲಕ್ಷ ಹಂಚಿಕೆ ಮಾಡಿದ್ದು, ಅದರಲ್ಲಿ 300 ಲಕ್ಷಗಳನ್ನು 3 ಕಂತಿನಲ್ಲಿ ಬಿಡುಗಡೆ ಮಾಡಲಾಗಿದೆ. ಬಾಕಿ ಹಣದ ಮಂಜೂರಾತಿಗಾಗಿ ಆರ್ಥಿಕ ಇಲಾಖೆಗೆ ಕಳುಹಿಸಲಾಗಿ, ಆರ್ಥಿಕ ಇಲಾಖೆಯು FD, 324 EXP-I/2010, ದಿನಾಂಕ : 18-03-2010 ರ ಅನ್ವಯ ರೂ. 2.00 ಕೋಟಿಗಳನ್ನು ಆಹಾರ ಪಾರ್ಕ್‌ಗಳ ಅನುಷ್ಠಾನಕ್ಕೆ ಲೆಕ್ಕಶೀರ್ಷಿಕೆ 4851-00-800-5-00-132 (ಸಾಮಾನ್ಯ) ರಡಿಯಲ್ಲಿ ಬಿಡುಗಡೆ ಮಾಡಲು ಸಹಮತಿಸಿರುತ್ತದೆ.

ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಸಿಐ 352 ಎಸ್‌ಪಿಐ 2008(ಪಿ), ಬೆಂಗಳೂರು, ದಿನಾಂಕ 23ನೇ ಮಾರ್ಚಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಮಾಲೂರು, ಹಿರಿಯೂರು, ಜೇವರ್ಗಿ ಮತ್ತು ಬಾಗಲಕೋಟೆ ಆಹಾರ ಪಾರ್ಕ್‌ಗಳ ಅಭಿವೃದ್ಧಿ ಕಾರ್ಯ ಕೈಗೊಳ್ಳಲು 2009-10ನೇ ಸಾಲಿನಲ್ಲಿ ರೂ. 200.00 ಲಕ್ಷಗಳ ಅನುದಾನವನ್ನು 4ನೇ ಕಂತಿನ ರೂಪದಲ್ಲಿ ಲೆಕ್ಕಶೀರ್ಷಿಕೆ 4851-00-800-5-00-132 (ಸಾಮಾನ್ಯ) ರಡಿಯಲ್ಲಿ ಈ ಮೂಲಕ ಬಿಡುಗಡೆ ಮಾಡಲಾಗಿದೆ.

ಸದರಿ ಮೊತ್ತವನ್ನು ವಿಶೇಷ ಅಧಿಕಾರಿ, ಆಹಾರ ಕರ್ನಾಟಕ ನಿಯಮಿತ, ಬೆಂಗಳೂರುರವರು ಸ್ವೀಕೃತಿ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ಖಜಾನೆಯಿಂದ ಡ್ರಾ ಮಾಡಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಭಿಪ್ರಾಯ ಸಂಖ್ಯೆ: FD 324 EXP-I/2010, ದಿನಾಂಕ : 18–03–2010. ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಅಪರ್ಣ ಪಾವಟೆ**
ಪೀಠಾಧಿಕಾರಿ (ತಾ.ಕೋ.)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.866

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು 2006–07ನೇ ಸಾಲಿಗೆ

**ಓದಲಾಗಿದೆ :** 1. ದಿನಾಂಕ : 12–04–2007 ರಂದು ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.

2. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ : 13–06–2007.

3. ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 07 (ಭಾ–2) (9), ದಿನಾಂಕ : 21–05–2008

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (3) ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಯಿಸುವ ದೃಷ್ಟಿಯಿಂದ ಸಕ್ಕರೆ ಕಾರ್ಖಾನೆಗಳು 2006–07ನೇ ಸಾಲಿನ ಸಕ್ಕರೆ ವರ್ಷದಲ್ಲಿ ದಿನಾಂಕ : 16–04–2007 ರಿಂದ ದಿ : 31–05–2007ರವರೆಗಿನ ವಿಸ್ತರಿಸಿದ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ 100/– ರೂ.ಗಳ ಸಹಾಯ ಧನವನ್ನು ಆದೇಶದ ಅನುಬಂಧದಲ್ಲಿ ಕಾಣಿಸಿರುವ 21 ಸಕ್ಕರೆ ಕಾರ್ಖಾನೆಗಳಿಗೆ ಅವುಗಳಿಗೆ ಪಾವತಿಸಬೇಕಾದ ಒಟ್ಟು 1902.44 ಲಕ್ಷ ರೂ.ಗಳಲ್ಲಿ 1000.00 ಲಕ್ಷ ರೂ.ಗಳನ್ನು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ. ಈ 21 ಸಕ್ಕರೆ ಕಾರ್ಖಾನೆಗಳಲ್ಲಿ ಈ ಕೆಳಕಂಡ 7 ಸಕ್ಕರೆ ಕಾರ್ಖಾನೆಗಳು ಸರ್ಕಾರಕ್ಕೆ ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿದ್ದು, ಈ ಕಾರ್ಖಾನೆಗಳಿಗೆ ಬಿಡುಗಡೆಗೊಳಿಸಬೇಕಾಗಿರುವ ಬಾಕಿ ಉಳಿದ ಸಹಾಯಧನವನ್ನು ಬಿಡುಗಡೆಗೊಳಿಸಿ ಸದರಿ ಮೊತ್ತವನ್ನು ಸರ್ಕಾರದ ಲೆಕ್ಕಕ್ಕೆ ಹೊಂದಾಣಿಕೆ ಮೂಲಕ ಜಮೆ ಮಾಡಿಕೊಳ್ಳಲು ನಿರ್ಧರಿಸಲಾಗಿದೆ.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಸಕ್ಕರೆ ಕಾರ್ಖಾನೆಯ ಹೆಸರು | ಕಾರ್ಖಾನೆಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ | ದಿ : 21–05–08ರ ಆದೇಶದಲ್ಲಿ ಬಿಡುಗಡೆ ಮಾಡಲಾದ ಹಣ | ಬಿಡುಗಡೆಗೆ ಬಾಕಿ ಉಳಿದ ಹಣ | ಸರ್ಕಾರದ ಲೆಕ್ಕಕ್ಕೆ ಹೊಂದಾಣಿಕೆ ಮಾಡಿಕೊಳ್ಳಬೇಕಾದ ಹಣ |
|---|---|---|---|---|---|
| 1 | ಕೃಷ್ಣಾ ಸ.ಸ.ಕಾ. | 74.91 | 35.00 | 39.91 | 39.91 |
| 2 | ಅಥಣಿ ಫಾರ್ಮರ್ಸ್ ಶುಗರ್ಸ್ ಲಿ., | 88.63 | 45.00 | 43.63 | 43.63 |
| 3 | ಜಮಖಂಡಿ ಶುಗರ್ಸ್ ಲಿ., | 106.18 | 55.00 | 51.18 | 51.18 |
| 4 | ನಿರಾಣಿ ಶುಗರ್ಸ್ ಲಿ., | 17.91 | 1.00 | 7.91 | 7.91 |
| 5 | ನಂದಿ ಸ.ಸ.ಕಾ | 134.68 | 70.00 | 64.68 | 64.68 |
| 6 | ಶ್ರೀ ರೇಣುಕಾ ಶುಗರ್ಸ್ ಲಿ., ಆಳಂದಾ (ಆಳಂದ ಸ.ಸ.ಕಾ ಗುತ್ತಿಗೆಗೆ ಪಡೆದಿರುತ್ತಾರೆ) | 41.59 | 25.00 | 16.59 | 16.59 |
| 7 | ಬನ್ನಾರಿ ಅಮ್ಮನ್ ಶುಗರ್ಸ್ ಲಿ., ನಂಜನಗೂಡು | 238.90 | 122.45 | 116.45 | 116.45 |
| | | | ಒಟ್ಟು | 340.35 | 340.35 |

**ಸರ್ಕಾರದ ಆದೇಶ ಸಂಖ್ಯೆ : ಸಿಐ 58 ಎಸ್‌ಜಿಎಫ್ 2007 (ಭಾ–7), ಬೆಂಗಳೂರು, ದಿನಾಂಕ 23ನೇ ಮಾರ್ಚ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈ ಕೆಳಕಂಡ 7 ಸಕ್ಕರೆ ಕಾರ್ಖಾನೆಗಳಿಗೆ ವಿಸ್ತರಿಸಿದ ಅವಧಿ ದಿನಾಂಕ : 16–04–2007 ರಿಂದ 31–05–2007ರವರೆವಿಗಿನ ಅವಧಿಯಲ್ಲಿ ನುರಿಸಿದ ಪ್ರತಿ ಟನ್ ಕಬ್ಬಿಗೆ 100/–ರೂ.ಗಳ ಸಹಾಯಧನದ ಬಾಕಿ ಮೊತ್ತ 340.35 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದ್ದು, ಈ 7 ಸಕ್ಕರೆ ಕಾರ್ಖಾನೆಗಳು ಸರ್ಕಾರಕ್ಕೆ ಕಬ್ಬು ಖರೀದಿ ತೆರಿಗೆ ಬಾಕಿ ಉಳಿಸಿಕೊಂಡಿರುವ ಹಿನ್ನೆಲೆಯಲ್ಲಿ ಬಿಡುಗಡೆ ಮಾಡಲಾದ 340.35 ಲಕ್ಷ ರೂ.ಗಳ ಸಹಾಯಧನವನ್ನು ಕಬ್ಬು ಖರೀದಿ ತೆರಿಗೆ ಬಾಕಿಗೆ ಹೊಂದಾಣಿಕೆ ಮಾಡಿಕೊಳ್ಳಲಾಗಿದೆ. ಪುಸ್ತಕ ಹೊಂದಾಣಿಕೆ ಮೊತ್ತ 340.35 ಲಕ್ಷ ರೂ.ಗಳನ್ನು ಲೆಕ್ಕ ಶೀರ್ಷಿಕೆ 2852–08–201–0–07 (ಯೋಜನೆ) ಇದರಡಿ ಬಿಡುಗಡೆಗೊಳಿಸಿ ನಂತರ ವೆಚ್ಚ ಹಾಕಿ ಲೆಕ್ಕ ಶೀರ್ಷಿಕೆ 0040–00–110–1–04 ಗೆ ಜಮೆ ತೋರಿಸಿ 2009–10ನೇ ಸಾಲಿನ ಲೆಕ್ಕಗಳಲ್ಲಿ ಮಹಾಲೇಖಪಾಲರು (ಹಕ್ಕು ಮತ್ತು ರಹದಾರಿ) ಲೆಕ್ಕ ಹೊಂದಾಣಿಕೆಯನ್ನು ಮಾಡುವರು.

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಸಕ್ಕರೆ ಕಾರ್ಖಾನೆಯ ಹೆಸರು | ಕಾರ್ಖಾನೆಗೆ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುವ ಮೊತ್ತ | ದಿ: 21–05–08ರ ಆದೇಶದಲ್ಲಿ ಬಿಡುಗಡೆ ಮಾಡಲಾದ ಹಣ | ಬಿಡುಗಡೆಗೆ ಬಾಕಿ ಉಳಿದ ಹಣ | ಸರ್ಕಾರದ ಲೆಕ್ಕಕ್ಕೆ ಹೊಂದಾಣಿಕೆ ಮಾಡಿಕೊಳ್ಳಬೇಕಾದ ಹಣ |
|---|---|---|---|---|---|
| 1 | ಕೃಷ್ಣಾ ಸ.ಸ.ಕಾ. | 74.91 | 35.00 | 39.91 | 39.91 |
| 2 | ಅಥಣಿ ಫಾರ್ಮರ್ಸ್ ಶುಗರ್ಸ್ ಲಿ., | 88.63 | 45.00 | 43.63 | 43.63 |
| 3 | ಜಮಖಂಡಿ ಶುಗರ್ಸ್ ಲಿ., | 106.18 | 55.00 | 51.18 | 51.18 |
| 4 | ನಿರಾಣಿ ಶುಗರ್ಸ್ ಲಿ., | 17.91 | 10.00 | 7.91 | 7.91 |
| 5 | ನಂದಿ ಸ.ಸ.ಕಾ | 134.68 | 70.00 | 64.68 | 64.68 |
| 6 | ಶ್ರೀ ರೇಣುಕಾ ಶುಗರ್ಸ್ ಲಿ., ಆಳಂದಾ (ಆಳಂದ ಸ.ಸ.ಕಾ ಗುತ್ತಿಗೆಗೆ ಪಡೆದಿರುತ್ತಾರೆ) | 41.59 | 25.00 | 16.59 | 16.59 |
| 7 | ಬನ್ನಾರಿ ಅಮ್ಮನ್ ಶುಗರ್ಸ್ ಲಿ., ನಂಜನಗೂಡು | 238.90 | 122.45 | 116.45 | 116.45 |
| | | | ಒಟ್ಟು | 340.35 | 340.35 |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 255 ವೆಚ್ಚ–1/2010 ದಿನಾಂಕ : 18–03–2010 ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಪಿ. ಆನಂದ್ ಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪಿ.ಆರ್.867

## ಇಂಧನ ಸಚಿವಾಲಯ

**ವಿಷಯ :** ಜಸ್ಟೀಸ್ ವಿ.ಪಿ.ಮೋಹನ್ ಕುಮಾರ್, ವಿಚಾರಣಾಧಿಕಾರಿಯವರ ಕಾರ್ಯಾಲಯದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರಿಗೆ ವೇತನವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿ.ಪಿ.ಸಿ. 2009 ದಿನಾಂಕ: 13–10–2009 ಮತ್ತು 03–02–2010.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 04–12–2009.
3. ಪತ್ರ ಸಂಖ್ಯೆ: ವಿ.ಪಿ.ಎಂ.ಐ/71/2010 ದಿನಾಂಕ: 16–01–2010.
4. ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 239 ವೆಚ್ಚ–1/2010 ದಿನಾಂಕ: 19–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 03–02–2010ರಲ್ಲಿ ವಿಚಾರಣೆಯ ಕಾಲಾವಧಿಯನ್ನು ದಿನಾಂಕ: 13–01–2010 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಸರ್ಕಾರಿ ಆದೇಶ (2)ರಲ್ಲಿ ನ್ಯಾಯಮೂರ್ತಿ ಶ್ರೀ ವಿ.ಪಿ. ಮೋಹನ್ ಕುಮಾರ್, ವಿಚಾರಣಾಧಿಕಾರಿಯವರ ಕಾರ್ಯಾಲಯಕ್ಕೆ ಕಾರ್ಯದರ್ಶಿ ಹಾಗೂ ಇತರೆ ಸಿಬ್ಬಂದಿ ವರ್ಗದ ಹುದ್ದೆಗಳನ್ನು ನೇಮಿಸಿಕೊಳ್ಳಲು ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಪತ್ರ (3) ರಲ್ಲಿ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರು ಈ ಕೆಳಕಂಡ ಸಿಬ್ಬಂದಿ ವರ್ಗದವರ ವೇತನವನ್ನು ನಿಗದಿ ಪಡಿಸುವಂತೆ ಕೋರಿರುತ್ತಾರೆ.

(ಅ) ಶ್ರೀ ಎ.ಡಿ. ನಾರಾಯಣ, ಹಿರಿಯ ಸಹಾಯಕರು

(ಆ) ಶ್ರೀ ಪಿ. ವೆಂಕಟರಮಣಪ್ಪ, ದ್ವಿತೀಯ ದರ್ಜೆ ಸಹಾಯಕರು

(ಇ) ಶ್ರೀ ಬಿ. ಪ್ರಸನ್ನ ಕುಮಾರ್, ಜಮೇದಾರ್.

ಮೇಲೆ ನಮೂದಿಸಿರುವ ಸಿಬ್ಬಂದಿ ವರ್ಗದವರು ಉಚ್ಚ ನ್ಯಾಯಾಲಯದಲ್ಲಿ ಕಾರ್ಯನಿರ್ವಹಿಸಿ ನಿವೃತ್ತಿ ಹೊಂದಿರುತ್ತಾರೆ. ಇವರ ಮರು ನೇಮಕಾತಿ ವೇತನವನ್ನು ನಿಗದಿಪಡಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

ಸರ್ಕಾರದ ಆದೇಶ ಸಂಖ್ಯೆ : ಇಎನ್ 125 ಪಿಪಿಸಿ 2009. ಬೆಂಗಳೂರು, ದಿನಾಂಕ : 23–03–2010.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎ.ಡಿ. ನಾರಾಯಣ, ಹಿರಿಯ ಸಹಾಯಕರು ಇವರ ಮರು ನೇಮಕಾತಿ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 313 (ಬಿ) ಪ್ರಕಾರ ರೂ. 6,440/– (ಆರು ಸಾವಿರದ ನಾಲ್ಕು ನೂರ ನಲವತ್ತು ರೂಪಾಯಿಗಳು ಮಾತ್ರ) ಗಳಿಗೆ ನಿಗದಿಪಡಿಸಿದೆ ಹಾಗೂ ಈ ವೇತನದೊಂದಿಗೆ ಶ್ರೀಯುತರು ನಿವೃತ್ತಿಯ ಸಮಯದಲ್ಲಿ ಪಡೆಯಬಹುದಾಗಿದ್ದ ಕಾಲ್ಪನಿಕ ಮೂಲ ವೇತನವಾದ ರೂ. 12650/– ಗಳಿಗೆ ಲಭ್ಯವಾಗುವ ಡಿಎ/ಹೆಚ್‌ಆರ್‌ಎ/ಸಿಸಿಎ) ಗಳನ್ನು ಪಡೆಯಬಹುದು. ಆದರೆ, ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ. ಶ್ರೀಯುತರ ನೇಮಕಾತಿಯು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ 1 ರಲ್ಲಿರುವಂತೆ ಷರತ್ತು ಮತ್ತು ನಿಬಂಧನೆಗೊಳಪಟ್ಟಿರುತ್ತದೆ.

ಶ್ರೀ ವೆಂಕಟರಮಣಪ್ಪ, ದ್ವಿತೀಯ ದರ್ಜೆ ಸಹಾಯಕರು ಇವರ ಮರು ನೇಮಕಾತಿ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 313 (ಬಿ) ಪ್ರಕಾರ ರೂ. 5,203/– (ಐದು ಸಾವಿರದ ಇನ್ನೂರ ಮೂರು ರೂಪಾಯಿಗಳು ಮಾತ್ರ) ಗಳಿಗೆ ನಿಗದಿಪಡಿಸಿದೆ ಹಾಗೂ ಈ ವೇತನದೊಂದಿಗೆ ಶ್ರೀಯುತರು ನಿವೃತ್ತಿಯ ಸಮಯದಲ್ಲಿ ಪಡೆಯಬಹುದಾಗಿದ್ದ ಕಾಲ್ಪನಿಕ ಮೂಲ ವೇತನವಾದ ರೂ. 9,750/– ಗಳಿಗೆ ಲಭ್ಯವಾಗುವ ಡಿಎ/ಹೆಚ್‌ಆರ್‌ಎ/ಸಿಸಿಎ ಗಳನ್ನು ಪಡೆಯಬಹುದು. ಆದರೆ, ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ

ಸೇವೆಯೆಂದು ಪರಿಗಣಿಸುವಂತಿಲ್ಲ. ಶ್ರೀಯುತರ ನೇಮಕಾತಿಯು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ 2 ರಲ್ಲಿರುವಂತೆ ಷರತ್ತು ಮತ್ತು ನಿಬಂಧನೆಗೊಳಪಟ್ಟಿರುತ್ತದೆ.

ಶ್ರೀ ಬಿ. ಪ್ರಸನ್ನ ಕುಮಾರ್, ಜಮೇದಾರ್ ಇವರ ಮರು ನೇಮಕಾತಿ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 313 (ಬಿ) ಪ್ರಕಾರ ರೂ. 4,826/– (ನಾಲ್ಕು ಸಾವಿರದ ಎಂಟನೂರ ಇಪ್ಪತ್ತಾರು ರೂಪಾಯಿಗಳು ಮಾತ್ರ) ಗಳಿಗೆ ನಿಗದಿಪಡಿಸಿದೆ ಹಾಗೂ ಈ ವೇತನದೊಂದಿಗೆ ಶ್ರೀಯುತರು ನಿವೃತ್ತಿಯ ಸಮಯದಲ್ಲಿ ಪಡೆಯಬಹುದಾಗಿದ್ದ ಕಾಲ್ಪನಿಕ ಮೂಲ ವೇತನವಾದ ರೂ. 10,700/– ಗಳಿಗೆ ಲಭ್ಯವಾಗುವ ಡಿಎ/ಹೆಚ್‌ಆರ್‌ಎ/ಸಿಸಿಎ ಗಳನ್ನು ಪಡೆಯಬಹುದು. ಆದರೆ, ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ. ನಿವೃತ್ತಿ ನಂತರದ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ. ಶ್ರೀಯುತರ ನೇಮಕಾತಿಯು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ 3 ರಲ್ಲಿರುವಂತೆ ಷರತ್ತು ಮತ್ತು ನಿಯಂಧನೆಗೊಳಪಟ್ಟಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 239 ವೆಚ್ಚ–1/2010 ದಿನಾಂಕ: 19–03–2010ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 19–03–2010ಕ್ಕೆ ಅನುಬಂಧ–1**

## ಗುತ್ತಿಗೆ ಆಧಾರದ ಮರು ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು

1. ಶ್ರೀ ಎ.ಡಿ. ನಾರಾಯಣ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 01–01–2010 ರಿಂದ 12–07–2010 ರ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಎ.ಡಿ. ನಾರಾಯಣ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 6,440/– ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಯಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರು ದುವರ್ತನೆ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.

12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಯಂಥನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

(ಎಸ್.ಜೆ. ಸಂಪತ್ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 19–03–2010ಕ್ಕೆ ಅನುಬಂಧ–2**

**ಗುತ್ತಿಗೆ ಆಧಾರದ ಮರು ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀ ವೆಂಕಟರಮಣಪ್ಪ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 15–01–2010 ರಿಂದ 12–07–2010 ರ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು. ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ವೆಂಕಟರಮಣಪ್ಪ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 5,203/– ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಯಂಥನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರು ದುವರ್ತನೆ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಂಡು ಬದ್ಧರಾಗಿರತಕ್ಕದ್ದು.
7. ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದವನ್ನು ಸದರಿ ನೇಮಕಾತಿಯ ಷರತ್ತು ಮತ್ತು ನಿಯಂಥನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

(ಎಸ್.ಜೆ. ಸಂಪತ್ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 19-03-2010ಕ್ಕೆ **ಅನುಬಂಧ-3**

**ಗುತ್ತಿಗೆ ಆಧಾರದ ಮರು ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀ ಬಿ. ಪ್ರಸನ್ನ ಕುಮಾರ್ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 01-12-2009 ರಿಂದ 12-07-2010 ರ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು. ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಬಿ. ಪ್ರಸನ್ನ ಕುಮಾರ್ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 4,826/- ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಯಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರು ದುರ್ವರ್ತನೆ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಂಡು ಬದ್ಧರಾಗಿರತಕ್ಕದ್ದು.
7. ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯ ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದವನ್ನು ಸದರಿ ನೇಮಕಾತಿಯ ಷರತ್ತು ಮತ್ತು ನಿಯಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

(ಎಸ್.ಜೆ. ಸಂಪತ್ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ.ಆರ್. 868

**ಇಂಧನ ಸಚಿವಾಲಯ**

**ವಿಷಯ :** ಜಸ್ಟೀಸ್ ವಿ.ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರ ಮರುನೇಮಕಾತಿ ವೇತನವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿ.ಪಿ.ಸಿ. 2009: 13–10–2009 ಮತ್ತು 03–02–2010.

**2.** ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿ.ಪಿ.ಸಿ. 2009 ದಿನಾಂಕ: 04–12–2009.

**3.** ಪತ್ರ ಸಂಖ್ಯೆ: ವಿ.ಪಿ.ಎಂ.ಐ/ವಿ.ಪ್ರಾ/40/2009 ದಿನಾಂಕ: 30–01–2010 ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿಯವರಿಂದ.

**4.** ಆರ್ಥಿಕ ಇಲಾಖೆಯ ಹಿಂಬರಹ ಸಂಖ್ಯೆ: ಆಇ 389 ವೆಚ್ಚ–1/2010 ಪಿ3 ದಿನಾಂಕ: 17–03–2010.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶ (1)ರಲ್ಲಿ ಉಚ್ಚ ನ್ಯಾಯಾಲಯದ ನಿವೃತ್ತ ನ್ಯಾಯಾಧೀಶರಾದ ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಕಲ್ಲಿದ್ದಲನ್ನು ಖರೀದಿಸುವಲ್ಲಿ ಹಾಗೂ ಕರ್ನಾಟಕ ಪ್ರಸರಣ ನಿಗಮ ನಿಯಮಿತದಲ್ಲಿ ಪವರ್ ಟ್ರಾನ್ಸ್‌ಫಾರ್ಮರ್ ಖರೀದಿಸುವಲ್ಲಿ ನಡೆದಿರುವ ಅಕ್ರಮಗಳ ಬಗ್ಗೆ ವಿಚಾರಣೆಯನ್ನು ನಡೆಸಲು ವಿಚಾರಣಾಧಿಕಾರಯನ್ನಾಗಿ ನೇಮಿಸಲಾಗಿದೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 03–02–2010 ರಲ್ಲಿ ವಿಚಾರಣೆಯ ಕಾಲಾವಧಿಯನ್ನು ದಿನಾಂಕ: 13–01–2010 ರಿಂದ ಮುಂದಿನ 6 ತಿಂಗಳವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ ಸರ್ಕಾರಿ ಆದೇಶ (2)ರಲ್ಲಿ ನ್ಯಾಯಮೂರ್ತಿ ಶ್ರೀ ವಿ.ಪಿ.ಮೋಹನ್ ಕುಮಾರ್, ವಿಚಾರಣಾಧಿಕಾರಿಯವರ ಕಾರ್ಯಾಲಯಕ್ಕೆ ಕಾರ್ಯದರ್ಶಿ ಹಾಗೂ ಇತರೆ ಹುದ್ದೆಗಳನ್ನು ನೇಮಿಸಿಕೊಳ್ಳಲು ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ ಓದಲಾದ ಪತ್ರ (3) ರಲ್ಲಿ ಶ್ರೀ ಶ್ರೀವತ್ಸ ಕೆದಿಲಾಯ, ಜಸ್ಟೀಸ್ ಶ್ರೀ ವಿ.ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರ ವೇತನವನ್ನು ನಿಗದಿ ಪಡಿಸುವಂತೆ ಮನವಿಯನ್ನು ಸಲ್ಲಿಸಿರುತ್ತಾರೆ.

ಶ್ರೀ ಶ್ರೀವತ್ಸ ಕೆದಿಲಾಯ, ಜಸ್ಟೀಸ್ ಶ್ರೀ. ವಿ.ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರ ಮರು ನೇಮಕಾತಿ ವೇತನವನ್ನು ನಿಗದಿಪಡಿಸುವ ಬಗ್ಗೆ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಿ, ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 125 ಪಿಪಿಸಿ 2009, ಬೆಂಗಳೂರು, ದಿನಾಂಕ : 23–03–2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಶ್ರೀವತ್ಸ ಕೆದಿಲಾಯ, ಜಸ್ಟೀಸ್ ವಿ.ಪಿ. ಮೋಹನ್ ಕುಮಾರ್‌ರವರ ಕಾರ್ಯದರ್ಶಿ ಇವರ ಮರುನೇಮಕಾತಿ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮ 313 (ಬಿ) ಪ್ರಕಾರ ರೂ. 13,278/– (ಹದಿಮೂರು ಸಾವಿರದ ಇನ್ನೂರ ಎಪ್ಪತ್ತೆಂಟು ರೂಪಾಯಿಗಳು ಮಾತ್ರ) ಗಳಿಗೆ ನಿಗದಿಪಡಿಸಿದೆ ಮತ್ತು ಈ ವೇತನದೊಂದಿಗೆ ಶ್ರೀಯುತರು ನಿವೃತ್ತಿಯ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನ (ಡಿ.ಪಿ. ಸೇರಿದಂತೆ) ರೂ. 29,400/– ಗಳಿಗೆ ಲಭ್ಯವಾಗುವ ಡಿಎ/ಹೆಚ್‌ಆರ್‌ಎ/ಸಿಸಿಎ ಗಳನ್ನು ಪಡೆಯಬಹುದು. ಆದರೆ, ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲ ಹಾಗೂ ನಿವೃತ್ತಿ ನಂತರದ ಈ ಸೇವೆಯನ್ನು ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವಂತಿಲ್ಲ. ಶ್ರೀಯುತರ ನೇಮಕಾತಿಯ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 389 ವೆಚ್ಚ–1/2010 ಪಿ3 ದಿನಾಂಕ: 17–03–2010 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 125 ಪಿಪಿಸಿ 2009 ದಿನಾಂಕ: 19-03-2010ಕ್ಕೆ ಅನುಬಂಧ**

**ಗುತ್ತಿಗೆ ಆಧಾರದ ಮರು ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಶ್ರೀ ಶ್ರೀವತ್ಸ ಕೆದಿಲಾಯ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿನಾಂಕ: 21-10-2009 ರಿಂದ 12-07-2010 ರ ಅವಧಿಯವರೆಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು. ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಶ್ರೀ ಶ್ರೀವತ್ಸ ಕೆದಿಲಾಯ ಇವರು ಪಡೆಯುತ್ತಿರುವ ನಿವೃತ್ತಿ ವೇತನದೊಂದಿಗೆ ರೂ. 13,278/- ಮರು ನೇಮಕಾತಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಈ ವೇತನದ ಜೊತೆಗೆ ಅವರು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲ ವೇತನ ಮೇಲೆ ಕಾಲಕಾಲಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆ ಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ. ಆದರೆ, ಅವರು ಪಡೆಯುತ್ತಿರುವ ನಿವೃತ್ತಿ ವೇತನದ ಮೇಲೆ ತುಟ್ಟಿಭತ್ಯೆ ಸೇರಿದಂತೆ ಯಾವುದೇ ಇತರ ಭತ್ಯೆಗಳು ಲಭ್ಯವಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರರು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆ ಮತ್ತು ಕೆ.ಸಿ.ಎಸ್.ಆರ್. ನಿಯಮ 150ರ ಪ್ರಕಾರ ಗಳಿಕೆ ರಜೆ ಪಡೆಯಲು ಅರ್ಹರಾಗಿರುತ್ತಾರೆ.
5. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ, ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
6. ಸದರಿ ನೌಕರರು ದುರ್ವರ್ತನೆ ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
7. ಸದರಿ ಮರು ನೇಮಕಾತಿ ಅವಧಿಯ ಸೇವೆಯನ್ನು ನಿವೃತ್ತಿ ವೇತನ ಹಾಗೂ ಇತ್ಯಾದಿ ಸೌಲಭ್ಯಗಳಿಗೆ ಅರ್ಹತಾದಾಯಕ ಸೇವೆಯೆಂದು ಪರಿಗಣಿಸುವುದಿಲ್ಲ.
8. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
9. ಅವರು ಕರ್ತವ್ಯಗಳನ್ನು ಪಾಲಿಸುತ್ತಿರುವ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
10. 1966 ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957 ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
11. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
12. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಉಂಟುಮಾಡಿದ್ದಲ್ಲಿ, ಅದನ್ನು ಸರ್ಕಾರಕ್ಕೆ ತುಂಬಿಕೊಡಲು ಅವರು ಹೊಣೆಯಾಗಿರುತ್ತಾರೆ.
13. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು (ರೂ. 50.00) ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

(ಎಸ್.ಜೆ. ಸಂಪತ್ ಕುಮಾರ್)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಪಿ.ಆರ್. 869

## ಇಂಧನ ಸಚಿವಾಲಯ

**ವಿಷಯ :** ವಿತರಣಾ ಕಂಪನಿಗಳಿಗೆ ವಿದ್ಯುತ್ ಹಂಚಿಕೆ ಬಗ್ಗೆ

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಇಎನ್ 45 ಪಿಎಸ್ಆರ್ 2006 ದಿನಾಂಕ: 22-04-2006.

2. ಸರ್ಕಾರದ ಪತ್ರ ಸಂಖ್ಯೆ: ಇಎನ್ 70 ಇಎಂಸಿ 2009 ದಿನಾಂಕ: 10-11-2009.

**ಪ್ರಸ್ತಾವನೆ :**

ವಿವಿಧ ಉತ್ಪದನಾ ಮೂಲಗಳಿಂದ ಉತ್ಪಾದಿಸಲ್ಪಡುವ ವಿದ್ಯುತ್ತನ್ನು ಸರ್ಕಾರದಿಂದ ಆಗಿಂದಾಗ್ಗೆ ಹೊರಡಿಸಲಾಗುವ ಆದೇಶಗಳ ಮೂಲಕ ರಾಜ್ಯದ ಎಲ್ಲಾ ವಿತರಣಾ ಕಂಪನಿಗಳಿಗೆ ಶೇಕಡಾವಾರು ಪ್ರಮಾಣದಲ್ಲಿ ಹಂಚಿಕೆ ಮಾಡಲಾಗುತ್ತಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ವಿತರಣಾ ಕಂಪನಿಗಳಿಗೆ ಮಾಡಲಾದ ಶೇಕಡವಾರು ವಿದ್ಯುತ್ ಹಂಚಿಕೆ ಕೆಳಕಂಡಂತಿರುತ್ತದೆ:-

| ವಿತರಣಾ ಕಂಪನಿ ಹೆಸರು | ಶೇಕಡಾವಾರು ವಿದ್ಯುತ್ ಹಂಚಿಕೆ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 45,9492 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8,7320 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 9,6912 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 20,3598 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 15,2678 |
| **ಒಟ್ಟು** | **100.00** |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ವಿತರಣಾ ಕಂಪನಿಗಳಿಗೆ ಮಾಡಲಾದ ಶೇಕಡಾವಾರು ವಿದ್ಯುತ್ ಹಂಚಿಕೆ ಕೆಳಕಂಡಂತಿರುತ್ತದೆ:-

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 50.5 |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 7.5 |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 18.0 |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.6 |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.4 |
| **ಒಟ್ಟು** | **100.00** |

ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣವನ್ನು ವಿದ್ಯುತ್ ಕಂಪನಿಗಳು ಬಳಸುವ ವಿದ್ಯುಚ್ಛಕ್ತಿ ಮತ್ತು ಸ್ಥಾವರಗಳ ಏರಿಕೆಯನ್ನು ಪರಿಗಣಿಸಿ ಮಾಡಲಾಗುತ್ತಿದೆ. ಪ್ರಸ್ತುತ, ನಿತ್ಯ ದೊರಕುವ ಮತ್ತು ವಿವಿಧ ಮೂಲಗಳ ಹೊಸ ಉತ್ಪಾದನಾ ಸ್ಥಾವರಗಳಿಂದ ವಿದ್ಯುಚ್ಛಕ್ತಿ ಹಂಚಿಕೆ ಮಾಡುವಾಗ ಈ ಕೆಳಕಂಡ ಶೇಕಡಾವಾರು ಪ್ರಮಾಣ ಹಂಚಿಕೆಯನ್ನು ಮಾಡಬೇಕಾಗುತ್ತದೆ.

| ವಿತರಣಾ ಕಂಪನಿ | ಶೇಕಡಾವಾರು ವಿದ್ಯುತ್ ಹಂಚಿಕೆ |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 49.62 % |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.33 % |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 18.18 % |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.26 % |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.61 % |
| **ಒಟ್ಟು** | **100.00** % |

ಈವರೆಗೆ ನಿತ್ಯ ದೊರಕುವ ವಿದ್ಯುಚ್ಛಕ್ತಿ ಹಂಚಿಕೆಯನ್ನು ತಾತ್ಕಾಲಿಕವಾಗಿ ಲಭ್ಯತೆಯನ್ನು ಪರಿಗಣಿಸಿ ಹಂಚಿಕೆ ಮಾಡಲಾಗುತ್ತಿತ್ತು. ಈ ವಿಷಯಕ್ಕೆ ಸಂಬಂಧಿಸಿದಂತೆ ದಿನಾಂಕ: 6-07-2009ರಲ್ಲಿ ನಡೆದ ಕಂಪನಿಗಳ ವ್ಯವಸ್ಥಾಪಕ ನಿರ್ದೇಶಕರುಗಳ ಸಭೆಯಲ್ಲಿ ಸವಿಸ್ತಾರವಾಗಿ ಚರ್ಚಿಸಲಾಯಿತು. ಈ ಸಭೆಯಲ್ಲಿ ಪ್ರಸ್ತುತ ಚಾಲ್ತಿಯಲ್ಲಿರುವ ಬಿಲ್ಲಿಂಗ್ ವ್ಯವಸ್ಥೆ ಮತ್ತು ಅನಿಯಮಿತ ಬದಲಾವಣೆ (ಯು.ಐ.) ಯ ಲೆಕ್ಕಚಾರವನ್ನು ಗಮನದಲ್ಲಿಟ್ಟುಕೊಂಡು ವಿದ್ಯುಚ್ಛಕ್ತಿಯ ನ್ಯಾಯಯುತ ಹಂಚಿಕೆಯ ಬಗ್ಗೆ ಕೆಪಿಟಿಸಿಎಲ್ ಮತ್ತು ವಿತರಣಾ ಕಂಪನಿಗಳೊಡನೆ ಚರ್ಚಿಸಲಾಯಿತು. ಈ ದಿಸೆಯಲ್ಲಿ ಉಂಟಾಗುವ ಬಿಲ್ಲಿಂಗ್ ಸಂಬಂಧಿಸಿದ ಗೊಂದಲಗಳನ್ನು ನಿವಾರಿಸಲು ಹಾಗೂ ಅನಿಯಮಿತ ಬದಲಾವಣೆಯ ಲೆಕ್ಕಾಚಾರವನ್ನು ಸುಗಮಗೊಳಿಸಲು ಹಾಗೂ ಹೊಸ ವಿದ್ಯುತ್ ಸ್ಥಾವರಗಳಿಂದ ವಿದ್ಯುತ್ ಹಂಚಿಕೆ ಮಾಡಲು ಆದೇಶ ಹೊರಡಿಸುವ ಅಗತ್ಯತೆ ಇರುವುದೆಂದು ನಿರ್ಧರಿಸಲಾಯಿತು.

ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ:-

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 126 ಇಎಂಸಿ 2010, ಬೆಂಗಳೂರು, ದಿನಾಂಕ : 24–03–2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭದಲ್ಲಿ ಸರ್ಕಾರವು ವಿತರಣಾ ಕಂಪನಿಗಳಿಗೆ ಈ ಕೆಳಕಂಡಂತೆ ಶೇಕಡಾವಾರು ವಿದ್ಯುಚ್ಛಕ್ತಿ ಪ್ರಮಾಣವನ್ನು ಈ ಆದೇಶದಲ್ಲಿ ತಿಳಿಸಿರುವ ನಿಯಂಧನೆಗೊಳಪಟ್ಟು ಹಂಚಿಕೆ ಮಾಡಿ ಆದೇಶಿಸಿದೆ.

| | |
|---|---|
| ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ | 49.62 % |
| ಮಂಗಳೂರು ವಿದ್ಯುತ್ ಸರಬರಾಜು ಕಂಪನಿ | 8.33 % |
| ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ | 18.18 % |
| ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ | 13.26 % |
| ಚಾಮುಂಡೇಶ್ವರಿ ವಿದ್ಯುತ್ ನಿಗಮ ನಿಯಮಿತ | 10.61 % |
| **ಒಟ್ಟು** | **100.00** |

**ನಿಬಂಧನೆಗಳು :**

1. ಈ ಆದೇಶವು ದಿನಾಂಕ 1–04–2010 ರಿಂದ ಜಾರಿಗೆ ಬರುತ್ತದೆ.
2. ಈ ಶೇಕಡಾವಾರು ವಿದ್ಯುತ್ ಹಂಚಿಕೆ ಪ್ರಮಾಣವು ಮುಂಬರುವ ಎಲ್ಲಾ ಹೊಸ ದೀರ್ಘಾವಧಿ ವಿದ್ಯುತ್ ಖರೀದಿಗಳಿಗೆ ಅನ್ವಯಿಸುತ್ತದೆ.
3. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಎಲ್ಲಾ ಹೊಸ ಸಾಂಪ್ರದಾಯಿಕ ವಿದ್ಯುತ್ ಯೋಜನೆಗಳಿಗೆ ಈ ಹಂಚಿಕೆ ಪ್ರಮಾಣವು ಅನ್ವಯಿಸುತ್ತದೆ.
4. ಈ ಶೇಕಡಾವಾರು ಹಂಚಿಕೆ ಪ್ರಮಾಣವು ಕೇಂದ್ರೀಯ ವಿದ್ಯುತ್ ಘಟಕಗಳ ವಿದ್ಯುತ್ ಹಂಚಿಕೆ ಪ್ರಮಾಣಕ್ಕೆ ಅನ್ವಯಿಸುತ್ತದೆ.
5. ಈ ಶೇಕಡಾವಾರು ಹಂಚಿಕೆ ಪ್ರಮಾಣವು ಅಸಂಪ್ರದಾಯಿಕ ಇಂಧನ ಮೂಲಗಳ ವಿದ್ಯುಚ್ಛಕ್ತಿಗೆ ಅನ್ವಯಿಸುವುದಿಲ್ಲ.
6. ಪಿಸಿಕೆಎಲ್ ರವರು ವಿತರಣಾ ಕಂಪನಿಗಳ ಪರವಾಗಿ ಖರೀದಿಸುವ ಅಲ್ಪಾವಧಿ ವಿದ್ಯುಚ್ಛಕ್ತಿ ಪ್ರಮಾಣಕ್ಕೆ ಅನ್ವಯಿಸುವುದಿಲ್ಲ.
7. ಈ ಶೇಕಡಾವಾರು ಹಂಚಿಕೆ ಪ್ರಮಾಣವನ್ನು ವಿತರಣಾ ಕಂಪನಿಗಳು ವಿದ್ಯುತ್ ಖರೀದಿ ಒಪ್ಪಂದ (ಪಿಪಿಎ) ದ ಮೂಲಕ ಇತರೆ ಮೂಲಗಳಿಂದ ಖರೀದಿಸಿ ಬೇರೆಯಾಗಿ ಹಣ ಪಾವತಿ ಮಾಡುತ್ತಿರುವ ವಿದ್ಯುಚ್ಛಕ್ತಿ ಪ್ರಮಾಣವನ್ನು ಹೊರತುಪಡಿಸಿ ನಿಗದಿಪಡಿಸಲಾಗಿದೆ.
8. ಈ ಶೇಕಡಾವಾರು ಹಂಚಿಕೆಯ ವಿತರಣಾ ಕಂಪನಿಗಳು ಬಳಕೆಮಾಡದಿರುವ wheeled energy ಗೆ ಅನ್ವಯಿಸುವುದಿಲ್ಲ.
9. ಪ್ರಸ್ತುತ ಬೆಂಗಳೂರು ವಿದ್ಯುತ್ ವಿತರಣಾ ಕಂಪನಿಗೆ ಹಂಚಿಕೆಯಾಗಿರುವ ಶೇ. 100% ಡೀಸೆಲ್ ವಿದ್ಯುತ್ ಮತ್ತು ಶೇ. 81.57 ರ ಟಾಟ ಮತ್ತು ರಾಯಲ್ ಸೀಮಾ ಸ್ವತಂತ್ರ ವಿದ್ಯುತ್ ಉತ್ಪಾದಕರ ವಿದ್ಯುತ್ ಪ್ರಮಾಣವು ಹಾಗೆಯೇ ಮುಂದುವರೆಯಲಿದೆ. ಅದರಂತೆ ಮಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಹಂಚಿಕೆಯಾಗಿರುವ ಶೇ. 18.42ರ ಟಾಟ ಮತ್ತು ರಾಯಲ್ ಸೀಮಾ ಸ್ವತಂತ್ರ ವಿದ್ಯುತ್ ಉತ್ಪಾದಕರ ವಿದ್ಯುತ್ ಪ್ರಮಾಣವು ಹಾಗೆಯೇ ಮುಂದುವರೆಯಲಿದೆ.
10. ಈ ಆದೇಶವು ಹಿಂದೆ ಜಾರಿಗೊಳಿಸಿದ ಎಲ್ಲಾ ತಾತ್ಕಾಲಿಕ ವಿದ್ಯುತ್ ಹಂಚಿಕೆ ಆದೇಶಗಳನ್ನು ಅನೂರ್ಜಿತಗೊಳಿಸುತ್ತದೆ.
11. ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಮತ್ತು ಕೇಂದ್ರಿಯ ವಿದ್ಯುತ್ ಉತ್ಪಾದನಾ ಕೇಂದ್ರಗಳು ಪ್ರತಿ ಮಾಹೆಯ ವಿದ್ಯುಚ್ಛಕ್ತಿ ಬಿಲ್ಲನ್ನು ವಿತರಣಾ ಕಂಪನಿಗಳಿಗೆ ತಯಾರು ಮಾಡುವಾಗ ಅನುಬಂಧದಲ್ಲಿನ ಪರಿಷ್ಕೃತ ಶೇಕಡಾವಾರು ಪ್ರಮಾಣವನ್ನು ಆಧಾರವಾಗಿಟ್ಟುಕೊಳ್ಳತಕ್ಕದ್ದು.
12. ಈ ಆದೇಶದಂತೆ ವಿತರಣಾ ಕಂಪನಿವಾರು ಹಂಚಿಕೆ ಮಾಡಲಾದ ವಿದ್ಯುತ್ ಪ್ರಮಾಣವನ್ನು ತಪ್ಪದೇ ಪಾಲಿಸುವುದು ಮತ್ತು ಈ ಹಂಚಿಕೆಯು ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 870

**ಎಸ್.ಜೆ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಸರ್ಕಾರಿ ಆದೇಶ ಸಂಖ್ಯೆ: ಇಎನ್ 126 ಇಎಂಸಿ 2010 ದಿನಾಂಕ: 24–03–2010ಕ್ಕೆ ಅನುಬಂಧ

## ವಿದ್ಯುತ್ ವಿತರಣಾ ಕಂಪನಿಗಳಿಗೆ ವಿವಿಧ ಉತ್ಪದನಾ ಮೂಲಗಳ ಶೇಕಡಾವಾರು ವಿದ್ಯುತ್ ಹಂಚಿಕೆ

| Sl No. | Source | Installed Capacity ( MW) | BESCOM | | MESCOM | | CESC | | HESCOM | | GESCOM | | TOTAL | |
|---|---|---|---|---|---|---|---|---|---|---|---|---|---|---|
| | | | % share | MW share | % share | MW share | % share | MW share | % share | MW share | % share | MW share | % share | MW share |
| 1 | Sharavathi | 1035 | 37.0000 | 382.9500 | 8.3900 | 86.8365 | 12.3600 | 127.9260 | 23.9200 | 247.5720 | 18.3300 | 189.7155 | 100.00 | 1035.00 |
| 2 | RTPS1&2 | 420 | 49.6200 | 208.4040 | 8.3300 | 34.9860 | 10.6100 | 44.5620 | 18.1800 | 76.3560 | 13.2600 | 55.6920 | 100.00 | 420.00 |
| 3 | RTPS 3 | 210 | 49.6200 | 104.2020 | 12.2000 | 25.6200 | 20.1300 | 422730 | 103400 | 21.7140 | 7.7100 | 16.1910 | 100.00 | 210.00 |
| 4 | RTPS 4 | 210 | 80.5000 | 169.0500 | 8.0000 | 16.8000 | 4.5000 | 9.4500 | 4.0000 | 8.4000 | 3.0000 | 6.3000 | 100.00 | 210.00 |
| 5 | RTPS 5 & 6 | 420 | 49.6200 | 208.4040 | 8.3300 | 34.9860 | 10.6100 | 44.5620 | 18.1800 | 76.3560 | 13.2600 | 55.6920 | 100.00 | 420.00 |
| 6 | RTPS 7 | 210 | 49.6200 | 104.2020 | 8.3300 | 17.4930 | 10.6100 | 22.2810 | 18.1800 | 38.1780 | 13.2600 | 27.8460 | 100.00 | 210.00 |
| 7 | Yelahanka DGS | 128 | 100.0000 | 128.0000 | 0.0000 | 0.0000 | 0.0000 | 0.0000 | 0.0000 | 0.0000 | 0.0000 | 0.0000 | 100.00 | 128.00 |
| 8 | For other remaining sources | | | | | | | | | | | | | |
| | NPH | 870 | 49.6200 | 431.694 | 8.3300 | 72.471 | 10.6100 | 92.307 | 18.1800 | 158.1660 | 13.2600 | 115.3620 | 100.00 | 870.00 |
| | VARAHI | 460 | 49.6200 | 228.252 | 8.3300 | 38.318 | 10.6100 | 48.806 | 18.1800 | 83.6280 | 13.2600 | 60.9960 | 100.00 | 460.00 |
| | GERUSOPPA | 240 | 49.6200 | 119.088 | 8.3300 | 19.992 | 10.6100 | 25.464 | 18.1800 | 43.6320 | 13.2600 | 31.8240 | 100.00 | 240.00 |
| | ALAMATTI | 290 | 49.6200 | 143.898 | 8.3300 | 24.157 | 10.6100 | 30.769 | 18.1800 | 52.7220 | 13.2600 | 38.4540 | 100.00 | 290.00 |
| | KADRA | 150 | 49.6200 | 74.43 | 8.3300 | 12.495 | 10.6100 | 15.915 | 18.1800 | 27.2700 | 13.2600 | 19.8900 | 100.00 | 150.00 |
| | KODASALLY | 120 | 49.6200 | 59.544 | 8.3300 | 9.996 | 10.6100 | 12.732 | 18.1800 | 21.8160 | 13.2600 | 15.9120 | 100.00 | 120.00 |
| | SUPA | 100 | 49.6200 | 49.62 | 8.3300 | 8.33 | 10.6100 | 10.61 | 18.1800 | 18.1800 | 13.2600 | 13.2600 | 100.00 | 100.00 |
| | L.D.P.H. | 55 | 49.6200 | 27.291 | 8.3300 | 4.5815 | 10.6100 | 5.8355 | 18.1800 | 9.9990 | 13.2600 | 7.2930 | 100.00 | 55.00 |
| | BHADRA | 39.2 | 49.6200 | 19.45104 | 8.3300 | 3.26536 | 10.6100 | 4.15912 | 18.1800 | 7.1266 | 13.2600 | 5.1979 | 100.00 | 39.20 |
| | GHATAPRABHA | 32 | 49.6200 | 15.8784 | 8.3300 | 2.6656 | 10.6100 | 3.3952 | 18.1800 | 5.8176 | 13.2600 | 4.2432 | 100.00 | 32.00 |
| | M.D.P.H. | 9 | 49.6200 | 4.4658 | 8.3300 | 0.7497 | 10.6100 | 0.9549 | 18.1800 | **1.6362** | 13.2600 | 1.1934 | 100.00 | 9.00 |
| | M.G.H.E. | 139.2 | 49.6200 | 69.07104 | 8.3300 | 11.59536 | 10.6100 | 14.76912 | 18.1800 | 25.3066 | 13.2600 | 18.4579 | 100.00 | 139.20 |
| | SIVASAMUDRA | 42 | 49.6200 | 20.8404 | 8.3300 | 3.4986 | 10.6100 | 4.4562 | 18.1800 | 7.6356 | 13.2600 | 5.5692 | 100.00 | 42.00 |
| | MUNIRABAD | 28 | 49.6200 | 13.8936 | 8.3300 | 2.3324 | 10.6100 | 2.9708 | 18.1800 | 5.0904 | 13.2600 | 3.7128 | 100.00 | 28.00 |
| | SHIMSHAPURA | 17.2 | 49.6200 | 8.53464 | 8.3300 | 1.43276 | 10.6100 | 1.82492 | 18.1800 | 3.1270 | 13.2600 | 2.2807 | 100.00 | 17.20 |
| | TB Dam Share | 14.4 | 49.6200 | 7.14528 | 8.3300 | 1.19952 | 10.6100 | 1.52784 | 18.1800 | 2.6179 | 13.2600 | 1.9094 | 100.00 | 14.40 |
| | CGS IMPORT | 1534.00 | 49.6200 | 761.1708 | 8.3300 | 127.7822 | 10.6100 | 162.7574 | 18.1800 | 278.8812 | 13.2600 | 203.4084 | 100.00 | 1534.00 |
| | **Total** | **6773** | **49.601063** | **3359.4800** | **8.29150303** | **561.5835** | **10.7826369** | **730.308** | **18.0308283** | **1221.228** | **13.2939687** | **900.4005** | **100.00** | **6773** |

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

## FINANCE SECRETARIAT

**Sub :-** Karnataka Tax on professions, Trading, Callings and Employments Act, 1976- Waiver of interest and penalty liable/payable for delayed payment of Profession Tax in respect of branches of banks (banking companies) for the years 2003-04 to 2008-09 regarding.

**Ref :-** Request of the Convener, State Level Banks Committee, Karnataka.

**Preamble:**

The Convener, State Level Bankers' Committee, Karnataka has requested for waiver of interest and penalty payable on delayed payment of Professional Tax in respect of branches of the various banks operating in Karnataka for the years from 2003-04 to 2008-09.

The matter has been examined and it is considered that there is merit in the requisition. Hence, the following Order :

**GOVERNMENT ORDER NO. FD 06 CPT 2008, DATED : 25-03-2010**

Approval of the Government is accorded to condone the delay in payment of professional tax by banking companies as defined in the Banking Regulations Act, 1949 in respect of their branches for the years from 2003-04 to 2008-09 and to waive the consequential penalty and interest leviable/payable subject to the condition that the Professional Tax payable in respect of all their branches for these years are paid by them within thirty days from the date of this Government Order, if not already paid.

By Order and in the name of the Governor of Karnataka

(**K. Mohan)**

PR NO. 871

Desk Officer

Finance Department (C.T.I.)

## ಒಳಾಡಳಿತ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆಯ ಲೋಕಾಪುರ ಪೊಲೀಸ್ ಠಾಣೆ ಅಪರಾಧ ಸಂ. 113/07ರ ತನಿಖೆಯನ್ನು ಸಿ.ಐ.ಡಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗದ ಆದೇಶ ಸಂ. ಹೆಚ್.ಆರ್.ಸಿ. 1304/08 ದಿನಾಂಕ 2-2-2010.

**ಪ್ರಸ್ತಾವನೆ :**

ಶ್ರೀ ಕಲ್ಲಪ್ಪ ಬಸಪ್ಪ ಬೀರಣಗಿ ಎಂಬುವವರು ದಿನಾಂಕ 30-4-2008 ರಂದು ಕರ್ನಾಟಕ ರಾಜ್ಯ ಮಾನವ ಹಕ್ಕುಗಳ ಆಯೋಗಕ್ಕೆ ದೂರನ್ನು ಸಲ್ಲಿಸಿ ಅವರ ಮಗ ಪ್ರವೀಣ ಎಂಬುವವರನ್ನು ಕೃಷ್ಣ ಯಮುನಪ್ಪ ಬೀಳಗಿ ಮತ್ತು ಆತನ ಸಹಚರರು ನಿಗೂಢವಾಗಿ ಕೊಲೆ ಮಾಡಿರುತ್ತಾರೆಂದು ಆಪಾದಿಸಿರುತ್ತಾರೆ ಹಾಗೂ ಈ ಬಗ್ಗೆ ಸಂಬಂಧಪಟ್ಟ ಪೊಲೀಸರು ಯಾವುದೇ ರೀತಿ ಕಾನೂನಿನನ್ವಯ ಕ್ರಮ ಜರುಗಿಸುತ್ತಿಲ್ಲವೆಂದು ದೂರು ನೀಡಿರುತ್ತಾರೆ.

ಬಾಗಲಕೋಟೆ ಜಿಲ್ಲಾ ಪೊಲೀಸ್ ಅಧೀಕ್ಷಕರ ವರದಿಯ ಅನುಸಾರ ಮೃತರು ಮೋಟಾರ್ ಸೈಕಲ್ ಅಪಘಾತದಿಂದ ಮೃತರಾಗಿದ್ದು ಈ ಬಗ್ಗೆ ಲೋಕಾಪುರ ಪೋಲೀಸ್ ಠಾಣೆಯಲ್ಲಿ ಮೊ.ಸಂ. 113/07ನ್ನು ಐಪಿಸಿ ಕಲಂ 278, 337, 304(ಎ) ಅನ್ವಯ ದಾಖಲು ಮಾಡಲಾಗಿದ್ದು ದಿನಾಂಕ 26-09-07ರಂದು ಅಬೇಟ್ ಎಂದು ದೋಷಾರೋಪಣಾ ಪಟ್ಟಿಯನ್ನು ನ್ಯಾಯಾಲಯಕ್ಕೆ ಸಲ್ಲಿಸಿದ್ದು ಘಟನೆಯ ವಿಚಾರಣೆಗೆ ಹಾಜರಾಗುವಂತೆ ತಿಳಿಸಿದ್ದರೂ ಅರ್ಜಿದಾರರು ವಿಚಾರಣೆಗೆ ಹಾಜರಾಗಿಲ್ಲವೆಂದು ಹೇಳಲಾಗಿದೆ.

ಮೇಲೆ ಓದಲಾದ ಆದೇಶದಲ್ಲಿ ರಾಜ್ಯ ಮಾನವ ಹಕ್ಕುಗಳ ಆಯೋಗವು ಅರ್ಜಿದಾರರ ಮಗ ಪ್ರವೀಣನು ಮೃತಪಟ್ಟ ವಿಷಯಕ್ಕೆ ಸಂಬಂಧಿಸಿದ ಬಾಗಲಕೋಟೆ ಜಿಲ್ಲೆಯ ಲೋಕಾಪುರ ಪೊಲೀಸ್ ಠಾಣೆ ಅಪರಾಧ ಸಂ. 113/07ನ್ನು ರಾಜ್ಯ ಅಪರಾಧ ತನಿಖಾ ದಳಕ್ಕೆ ನ್ಯಾಯ ಸಮ್ಮತವಾದ ಮರು ತನಿಖೆಗಾಗಿ ಒಪ್ಪಿಸಲು ಆದೇಶಿಸಿರುತ್ತದೆ.

ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ : ಒಇ 31 ಸಿಐಡಿ 2010 ಬೆಂಗಳೂರು, ದಿನಾಂಕ : 20-03-2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆಯ ಲೋಕಾಪುರ ಪೊಲೀಸ್ ಠಾಣೆಯ ಮೊ.ಸಂ. 113/07 ಐಪಿಸಿ ಕಲಂ 278, 337, 304(ಎ) ನ್ನು ಮರು ತನಿಖೆಗಾಗಿ ಸಿ.ಐ.ಡಿ.ಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಜಿಲ್ಲಾ ಪೊಲೀಸ್ ಅಧೀಕ್ಷಕರು, ಬಾಗಲಕೋಟೆ ಇವರು ಸದರಿ ಮೊಕದ್ದಮೆಗೆ ಸಂಬಂಧಿಸಿದ ಕಡತವನ್ನು ಸಿ.ಐ.ಡಿಗೆ ವರ್ಗಾಯಿಸಲು ಅಗತ್ಯ ಕ್ರಮ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 872

**(ಪಿ. ಶಿವರಾಮ ಭಟ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಅಪರಾಧಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಕೆ.ಎಂ. ಗಂಗಾಧರಪ್ಪ, ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರು ವರ್ಗಾವಣೆ ಆದೇಶದ ಬಗ್ಗೆ ವೃಂದ ನಿರ್ವಹಣಾ ಪ್ರಾಧಿಕಾರಕ್ಕೆ ಸಲ್ಲಿಸಿದ ಮನವಿ – ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನ ಅನ್ವಯ ಆದೇಶ.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ : ಒಇ 493 ಪೊಸಿಪ 2009, ದಿನಾಂಕ: 16-10-2009.
2. ಪತ್ರ ಸಂಖ್ಯೆ : ಒಇ 493 ಪೊಸಿಪ 2009, ದಿನಾಂಕ : 10-12-2009.
3. ಕೆ.ಎ.ಟಿ. ಅರ್ಜಿ ಸಂಖ್ಯೆ : 276/2010 ರಲ್ಲಿ ದಿನಾಂಕ : 16-01-2010 ರಂದು ನೀಡಿದ ತೀರ್ಪು.
4. ಶ್ರೀ ಕೆ.ಎಂ. ಗಂಗಾಧರಪ್ಪ, ಕಮಾಂಡೆಂಟ್ ರವರ ಮನವಿ ದಿನಾಂಕ : 05-01-2010 ಮತ್ತು 15-01-2010.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಅಧಿಸೂಚನೆ ಸಂಖ್ಯೆ : ಒಇ 493 ಪೊಸಿಪ 2009 ದಿನಾಂಕ 16-10-2009ರಲ್ಲಿ ಶ್ರೀ ಕೆ.ಎಂ. ಗಂಗಾಧರಪ್ಪ, ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ. ಬೆಂಗಳೂರು ಇವರನ್ನು ಕಮಾಂಡೆಂಟ್, ಇಂಡಿಯಾ ರಿಸರ್ವ್ ಬೆಟಾಲಿಯನ್, ಬಿಜಾಪುರ ಇಲ್ಲಿ ಹೊಸದಾಗಿ ಸೃಜಿಸಿರುವ ಹುದ್ದೆಗೆ ಸಾರ್ವಜನಿಕ ಹಿತದೃಷ್ಟಿಯಿಂದ, ತಕ್ಷಣದಿಂದ ಜಾರಿಗೆ ಬರುವಂತೆ ವರ್ಗಾಯಿಸಲಾಗಿತ್ತು. ಆದರೆ ಡಿಜಿ ಮತ್ತು ಐಜಿಪಿ ರವರು ಸದರಿ ಅಧಿಕಾರಿಯವರನ್ನು ಪ್ರಸ್ತುತ ಹುದ್ದೆಯಲ್ಲಿಯೇ ಮುಂದುವರೆಸಲು ಕೋರಿದ್ದ ದಿನಾಂಕ 31-10-2009ರ ಪ್ರಸ್ತಾವನೆಯನ್ನು ಪರಿಶೀಲಿಸಿ ಬಿಜಾಪುರದಲ್ಲಿ ಹೊಸದಾಗಿ ಸೃಜಿಸಿರುವ ಹುದ್ದೆಯನ್ನು ಭರ್ತಿ ಮಾಡುವುದು ಅವಶ್ಯಕವಾಗಿರುವುದರಿಂದ ಸದರಿ ಅಧಿಕಾರಿಯವರನ್ನು ಕೂಡಲೇ ಸೇವೆಯಿಂದ ಬಿಡುಗಡೆಗೊಳಿಸಿ ವರ್ಗಾಯಿಸಿದ ಸ್ಥಳದಲ್ಲಿ ತಕ್ಷಣವೇ ಹಾಜರಾಗಲು ನಿರ್ದೇಶಿಸುವಂತೆ ದಿನಾಂಕ 10-12-2009ರ ಪತ್ರದಲ್ಲಿ ಸೂಚಿಸಲಾಗಿತ್ತು.

ಈ ವರ್ಗಾವಣೆಯ ವಿರುದ್ಧ ಶ್ರೀ ಕೆ.ಎಂ. ಗಂಗಾಧರಪ್ಪ, ಕಮಾಂಡೆಂಟ್ ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ : 276/2010ನ್ನು ಸಲ್ಲಿಸಿದ್ದು ಕೆ.ಎ.ಟಿ.ಯು ತನ್ನ ದಿನಾಂಕ 16-01-2010ರ ತೀರ್ಪಿನಲ್ಲಿ (ಕೆ.ಎ.ಟಿ. ತೀರ್ಪಿನ ದಿನಾಂಕವನ್ನು ತಪ್ಪಾಗಿ 16-01-2009 ಎಂದು ನಮೂದಿಸಲಾಗಿದೆ) ಕೆಳಕಂಡಂತೆ ಆದೇಶಿಸಿದೆ.

i) The application is disposed of :

ii) The Cadre Management Authority is directed to consider the Review Application dated 15-01-2010 (Annexure-A4) filed by the Applicant and pass appropriate orders in accordance with law within four weeks from the date a certified copy of this order.

iii) Till the final order is passed, the parties are directed to maintain status-quo as on today.

ಶ್ರೀ ಕೆ.ಎಂ.ಗಂಗಾಧರಪ್ಪ ಇವರು ಮೊದಲಿಗೆ ದಿನಾಂಕ 05-01-2010ರಲ್ಲಿ ಮನವಿಯನ್ನು ಸಲ್ಲಿಸಿ ತಮ್ಮ ವರ್ಗಾವಣೆಯನ್ನು ಸರ್ಕಾರದ ಆದೇಶ ದಿನಾಂಕ 24-08-2009ರನ್ವಯ ಪೊಲೀಸ್ ಸಿಬ್ಬಂದಿ ಮಂಡಳಿಯು ಪರಿಶೀಲಿಸಬೇಕಾಗಿದ್ದು, ಈ ಬಗ್ಗೆ ಮಂಡಳಿಯ ನಡವಳಿ ಇರುವುದಿಲ್ಲವೆಂದು ಹಾಗೂ ದಿನಾಂಕ 22-11-2001 ರ ಸಿ.ಆ.ಸು.ಇ. ಆದೇಶದನ್ವಯ ತಮ್ಮ ವರ್ಗಾವಣೆಯನ್ನು ವೃಂದ ನಿರ್ವಹಣಾ ಪ್ರಾಧಿಕಾರವು ಪರಿಗಣಿಸಿಲ್ಲವೆಂದು ತಿಳಿಸಿರುತ್ತಾರೆ. ಮುಂದುವರೆದು, ತಮ್ಮ ವರ್ಗಾವಣೆಯನ್ನು ದಿನಾಂಕ 16-10-2009 ರಂದು ಹೊರಡಿಸಿದ್ದರೂ ಇನ್ನೂ ಜಾರಿಗೆ ತಂದಿಲ್ಲವೆಂದು, ಸರ್ಕಾರವು ಅಧಿಸೂಚನೆಯನ್ನು ಜಾರಿಗೆ ತರಲು ಡಿಜಿ ಮತ್ತು ಐಜಿಪಿ ರವರಿಗೆ ಸೂಚಿಸಿರುವ ಹಿನ್ನೆಲೆಯಲ್ಲಿ ಈ ಮನವಿಯನ್ನು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಹಾಗೂ ದಿನಾಂಕ 16-10-2009ರಂದು ಹೊರಡಿಸಿರುವ ಆದೇಶವನ್ನು ಪರಿಶೀಲಿಸಿ ತಮ್ಮನ್ನು 1ನೇ ಬೆಟಾಲಿಯನ್, ಕೆ.ಎಸ್.ಆರ್.ಪಿ. ಬೆಂಗಳೂರು ಇಲ್ಲಿ ಮುಂದುವರೆಸಲು ಕೋರಿರುತ್ತಾರೆ. ಇವರು ದಿನಾಂಕ 15-01-2010 ರಂದು ಡಿಜಿ ಮತ್ತು ಐಜಿಪಿ ರವರ ಮುಖಾಂತರ ಮನವಿಯನ್ನು ಸಲ್ಲಿಸಿದ್ದು, ಡಿಜಿ ಮತ್ತು ಐಜಿಪಿ ರವರು ದಿನಾಂಕ 03-02-2010 ರಂದು ಸರ್ಕಾರಕ್ಕೆ ಕಳುಹಿಸಿರುತ್ತಾರೆ. ಈ ಮನವಿಯಲ್ಲಿ ಸಹ ಮೇಲಿನ ಅಂಶಗಳನ್ನೇ ಉಲ್ಲೇಖಿಸಿದ್ದು, ತಮ್ಮ ಮನವಿಯಲ್ಲಿ ಈ ವರ್ಗಾವಣೆಯು " is wholly illegal, orbitrary and it does not involve any public interest" ಎಂದು ತಿಳಿಸಿರುತ್ತಾರೆ. ಪೊಲೀಸ್ ಸಿಬ್ಬಂದಿ ಮಂಡಳಿಯು ತಮ್ಮ ವರ್ಗಾವಣೆಯನ್ನು ಪರಿಗಣಿಸಿಲ್ಲವೆಂದು, ಯಾವುದೇ ಶಿಫಾರಸ್ಸು ಇಲ್ಲದೇ ಸರ್ಕಾರವು ತಮ್ಮನ್ನು ಬೆಂಗಳೂರಿನಿಂದ ಬಿಜಾಪುರಕ್ಕೆ ವರ್ಗಾಯಿಸಿದೆ ಎಂದು ಮನವಿ ಸಲ್ಲಿಸಿರುತ್ತಾರೆ. ದಿನಾಂಕ 22-11-2001ರ ಆದೇಶದನ್ವಯ ತಮ್ಮ ವರ್ಗಾವಣೆಯನ್ನು ಜಾರಿಗೊಳಿಸಿಲ್ಲವೆಂದು ದಿನಾಂಕ 11-09-2009ರ ಸುತ್ತೋಲೆಯನ್ವಯ, ತಮ್ಮ ವರ್ಗಾವಣೆಯನ್ನು ಜಾರಿಗೊಳಿಸಿರುವ ಆದೇಶವು ದಿನಾಂಕ 22-11-2001ರ ಆದೇಶಕ್ಕೆ ವಿರುದ್ಧವಾಗಿರುತ್ತದೆಂದು ತಿಳಿಸಿರುತ್ತಾರೆ. ತಮ್ಮ ವರ್ಗಾವಣೆ ಆದೇಶವು 16-10-2009 ರಂದು ಹೊರಡಿಸಿದ್ದರೂ ಸಹ ಜಾರಿಯಾಗಿಲ್ಲವೆಂದು, ಆದ್ದರಿಂದ ತಮ್ಮನ್ನು ಬೆಂಗಳೂರಿನಲ್ಲಿಯೇ ಮುಂದುವರೆಸಲು ಕೋರಿರುತ್ತಾರೆ.

ವೃಂದ ನಿರ್ವಹಣಾ ಪ್ರಾಧಿಕಾರವು ಮನವಿಗಳಲ್ಲಿ ನಮೂದಿಸಿದ ಅಂಶಗಳನ್ನು ಗಮನಿಸಿತು. ಶ್ರೀ ಕೆ.ಎಂ. ಗಂಗಾ ಧರಪ್ಪ, ಇವರು ಜೂನ್-2005 ರಿಂದ ಸತತವಾಗಿ ಬೆಂಗಳೂರಿನಲ್ಲಿಯೇ ಕಾರ್ಯನಿರ್ವಹಿಸಿರುವುದನ್ನು ಪ್ರಾಧಿಕಾರವು ಗಮನಿಸಿತು. ಹೊಸದಾಗಿ ಸೃಜಿಸಿರುವ ಕಮಾಂಡೆಂಟ್, ಬಿಜಾಪುರ ಹುದ್ದೆಯಲ್ಲಿ ಕಾರ್ಯನಿರ್ವಹಿಸಿ ಕಾರ್ಯವನ್ನು ಪ್ರಾರಂಭಿಸಲು ಶ್ರೀ ಕೆ.ಎಂ. ಗಂಗಾಧರಪ್ಪ ಇವರು ಅನುಭವ ಹೊಂದಿರುವುದನ್ನು ಸಮಿತಿಯು ಪರಿಗಣಿಸಿತು.

ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2009 ದಿನಾಂಕ 24-08-2009ರಲ್ಲಿ ರಚಿಸಿರುವ ಪೊಲೀಸ್ ಸಿಬ್ಬಂದಿ ಮಂಡಳಿಯು ಡಿ.ವೈ.ಎಸ್.ಪಿ. ವೃಂದದವರೆಗಿನ ಅಧಿಕಾರಿಗಳ ವರ್ಗಾವಣೆ ಮತ್ತಿತರೆ ಸೇವಾ ವಿಷಯಗಳಿಗೆ ಸಂಬಂಧಿಸಿದ ಪ್ರಾಧಿಕಾರವಾಗಿರುತ್ತದೆ. ಎಸ್.ಪಿ. (ಸಿವಿಲ್) / (ಸಶಸ್ತ್ರ) / ಕಮಾಂಡೆಂಟ್ ವೃಂದದ ಅಧಿಕಾರಿಗಳ ವರ್ಗಾವಣೆಗಳಿಗೆ ಸರ್ಕಾರವೇ ಸಕ್ಷಮ ಪ್ರಾಧಿಕಾರವಾಗಿದೆ.

ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ, ವೃಂದ ನಿರ್ವಹಣಾ ಪ್ರಾಧಿಕಾರ ದಿನಾಂಕ 16-10-2009ರ ಅಧಿಸೂಚನೆ ಸಂಖ್ಯೆ : ಒಇ 493 ಪೊಸಿಪ 2009 ರಲ್ಲಿ ಶ್ರೀ ಕೆ.ಎಂ. ಗಂಗಾಧರಪ್ಪ, 1ನೇ ಬೆಟಾಲಿಯನ್, ಕೆ.ಎಸ್.ಆರ್.ಪಿ. ಬೆಂಗಳೂರು ಇವರನ್ನು ಕಮಾಂಡೆಂಟ್, ಇಂಡಿಯಾ ರಿಸರ್ವ್ ಬೆಟಾಲಿಯನ್, ಬಿಜಾಪುರ ಇಲ್ಲಿಗೆ ವರ್ಗಾಯಿಸಿರುವ ಆದೇಶವನ್ನು ಸ್ಥಿರೀಕರಿಸಿತು ಮತ್ತು ಇವರನ್ನು ತಕ್ಷಣವೇ ಪ್ರಸ್ತುತ ಹುದ್ದೆಯಿಂದ ಬಿಡುಗಡೆ ಹೊಂದಿ ವರ್ಗಾಯಿಸಿದ ಹುದ್ದೆಯಲ್ಲಿ ಹಾಜರಾಗಲು ನಿರ್ದೇಶಿಸುವಂತೆ ಪ್ರಾಧಿಕಾರವು ಶಿಫಾರಸ್ಸು ಮಾಡಿತು.

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಾಗೂ ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸನ್ನು ಸರ್ಕಾರವು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಒಇ 60 ಪೊಸಇ 2010, ಬೆಂಗಳೂರು, ದಿನಾಂಕ : 20ನೇ ಮಾರ್ಚ್ 2010**

ವೃಂದ ನಿರ್ವಹಣಾ ಪ್ರಾಧಿಕಾರದ ಶಿಫಾರಸ್ಸಿನಂತೆ ಸರ್ಕಾರವು ಪರಿಶೀಲಿಸಿ ದಿನಾಂಕ 16-10-2009ರ ಅಧಿಸೂಚನೆ ಸಂಖ್ಯೆ : ಒಇ 493 ಪೊಸಿಪ 2009ರಲ್ಲಿ ಶ್ರೀ ಕೆ.ಎಂ. ಗಂಗಾಧರಪ್ಪ, 1ನೇ ಬೆಟಾಲಿಯನ್, ಕೆ.ಎಸ್.ಆರ್.ಪಿ. ಬೆಂಗಳೂರು ಇವರನ್ನು ಕಮಾಂಡೆಂಟ್, ಇಂಡಿಯಾ ರಿಸರ್ವ್ ಬೆಟಾಲಿಯನ್, ಬಿಜಾಪುರ ಇಲ್ಲಿಗೆ ವರ್ಗಾಯಿಸಿರುವ ಆದೇಶವನ್ನು ಸ್ಥಿರೀಕರಿಸಿ ಆದೇಶಿಸಿದೆ.

ಮುಂದುವರೆದು, ಸ್ಥಳ ನೇಮಕಾತಿ ನಿರೀಕ್ಷಣೆಯಲ್ಲಿರುವ ಶ್ರೀ ಟಿ.ಡಿ. ಪವಾರ್, ಎಸ್.ಪಿ. (ಸಿವಿಲ್) (ನಾನ್ ಐಪಿಎಸ್) ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕಮಾಂಡೆಂಟ್, 1ನೇ ಪಡೆ, ಕೆ.ಎಸ್.ಆರ್.ಪಿ. ಇಲ್ಲಿ ಶ್ರೀ ಕೆ.ಎಂ. ಗಂಗಾಧರಪ್ಪ ಇವರ ವರ್ಗಾವಣೆಯಿಂದ ತೆರವಾದ ಸ್ಥಳದಲ್ಲಿ ನೇಮಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 873

**(ಟಿ.ಎನ್. ರವಿಪ್ರಕಾಶ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಒಳಾಡಳಿತ ಸಚಿವಾಲಯ**

**ವಿಷಯ :** 12ನೇ ಹಣಕಾಸು ಆಯೋಗದಡಿ 2009–10ನೇ ಸಾಲಿಗೆ ಬಾಕಿ ಉಳಿದಿರುವ ಅನುದಾನ ರೂ. 5.00 ಕೋಟಿಗಳನ್ನು ಬಿಡುಗಡೆ ಮಾಡಿರುವ ಅನುದಾನವನ್ನು ಡ್ರಾ ಮಾಡುವ ಕುರಿತು.

**ಓದಲಾಗಿದೆ :**
1. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ : ಟಿಟಿಎಂ/ಹ.ಹ. ಅಯೋಗ/2009–10, ದಿನಾಂಕ 08–03–2010.
2. ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 04 ಪಿಎಫ್‌ಎಸ್ 2010, ದಿನಾಂಕ 18–03–2010.
3. ಸರ್ಕಾರದ ಜಂಟಿ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆರ್ಥಿಕ ಆಯೋಗ ಕೋಶ) ರವರ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 13 ಆಆಕೋ 06, ದಿನಾಂಕ 22–03–2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, 12ನೇ ಹಣಕಾಸು ಆಯೋಗದಡಿಯಲ್ಲಿ 2009–10ನೇ ಸಾಲಿನಲ್ಲಿ ಬಿಡುಗಡೆ ಮಾಡಿ ಬಾಕಿ ಉಳಿದಿರುವ ರೂ. 5.00 ಕೋಟಿಗಳ ಅನುದಾನವನ್ನು (GPS based Vehicle Monitoring and Dial 100 System) (ರೂ. 4.00 ಕೋಟಿ) ಹಾಗೂ ಪೊಲೀಸ್ ಕಟ್ಟಡಗಳ ಕಾಮಗಾರಿಗಳಿಗೆ (ರೂ. 1.00 ಕೋಟಿ) ಅನುದಾನವನ್ನು ಬಿಡುಗಡೆ ಮಾಡಿ ಸದರಿ ಅನುದಾನವನ್ನು ಪೇಯಿಸ್ ರಸೀದಿಯ ಮೇಲೆ ಡ್ರಾ ಮಾಡಿ ಕರ್ನಾಟಕ ರಾಜ್ಯ ಪೊಲೀಸ್ ಗೃಹ ನಿರ್ಮಾಣ ನಿಗಮ ನಿಯಮಿತ, ಬೆಂಗಳೂರು ರವರಲ್ಲಿ ಠೇವಣಿ ಇಡಲು ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ 12ನೇ ಆರ್ಥಿಕ ಹಣಕಾಸು ಆಯೋಗದಡಿ ಪೊಲೀಸ್ ಆಡಳಿತ ಸುಧಾರಣೆಗಾಗಿ ಇದುವರೆಗೂ ಬಿಡುಗಡೆ ಮಾಡಿ ಬಾಕಿ ಉಳಿದಿರುವ ಅನುದಾನ ರೂ. 5.00 ಕೋಟಿಗಳನ್ನು ಸದರಿ ಆದೇಶದಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

ಮೇಲೆ ಓದಲಾದ (3)ರ ಅನಧಿಕೃತ ಟಿಪ್ಪಣಿಯಲ್ಲಿ, 12ನೇ ಹಣಕಾಸು ಆಯೋಗದಡಿ 2009–10ನೇ ಸಾಲಿಗೆ ಬಾಕಿ ಉಳಿದಿರುವ ಅನುದಾನ ರೂ. 5.00 ಕೋಟಿಗಳನ್ನು ಬಿಡುಗಡೆ ಮಾಡಿರುವ ಅನುದಾನವನ್ನು ಡ್ರಾ ಮಾಡಿ ಕೆ.ಎಸ್.ಪಿ.ಹೆಚ್.ಸಿ ರವರಲ್ಲಿ ಹಣ ಇಡಲು ಹಾಗೂ ದಿನಾಂಕ : 31–03–2010ಕ್ಕೆ ಕೆ.ಎಸ್.ಪಿ.ಹೆಚ್.ಸಿ ಬಳಿ ಬಳಸಿಕೊಳ್ಳದೇ ಉಳಿಯುವ ಹಣವನ್ನು ದಿನಾಂಕ : 05–04–2010ರೊಳಗೆ ರಾಜ್ಯ ಖಜಾನೆಗೆ ಜಮೆ ಮಾಡುವ ಷರತ್ತಿಗೆ ಒಳಪಟ್ಟಿರುತ್ತದೆಯೆಂದು ತಿಳಿಸಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 06 ಪಿಎಫ್‌ಎಸ್ 2010, ಬೆಂಗಳೂರು, ದಿನಾಂಕ : 25–03–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ : 18–03–2010ರ ಆದೇಶ ಸಂಖ್ಯೆ : ಹೆಚ್‌ಡಿ 4 ಪಿಎಫ್‌ಎಸ್ 2010ರನ್ನು ಭಾಗಷ : ಮಾರ್ಪಡಿಸಿ 12ನೇ ಹಣಕಾಸು ಆಯೋಗದಡಿ 2009–10ನೇ ಸಾಲಿಗೆ ಬಾಕಿ ಉಳಿದಿರುವ ಅನುದಾನ ರೂ. 5.00 ಕೋಟಿ (ಐದು ಕೋಟಿ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಿರುವ ಅನುದಾನವನ್ನು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಪೇಯೀಸ್ ರಸೀದಿಯ (Payees Receipt) ಮೇಲೆ ಡ್ರಾ ಮಾಡಿ ಕೆ.ಎಸ್.ಪಿ.ಹೆಚ್.ಸಿಯಲ್ಲಿ ಹಣ ಇಡಲು ಸರ್ಕಾರದ ಮಂಜೂರಾತಿ ನೀಡಿದೆ.

ಮುಂದುವರೆದು, ಈ ಮೊತ್ತವನ್ನು ದಿನಾಂಕ : 31-3-2010ಕ್ಕೆ ಕೆ.ಎಸ್.ಪಿ.ಹೆಚ್.ಸಿ ಬಳಸಿಕೊಳ್ಳದೇ ಇದ್ದಲ್ಲಿ ಸದರಿ ಬಳಸಿಕೊಳ್ಳದೇ ಬಾಕಿ ಉಳಿಯುವ ಹಣವನ್ನು ದಿನಾಂಕ :05–04–2010ರೊಳಗೆ ರಾಜ್ಯ ಖಜಾನೆಗೆ ಜಮೆ ಮಾಡತಕ್ಕದ್ದು.

ಈ ಅದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ : ಆಇ 13 ಆಆಕೋ 06, ದಿನಾಂಕ : 22–03–2010ರ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 874

**(ಜಿ.ಎಂ. ಲಕ್ಷ್ಮೀನಾರಾಯಣ)**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

**ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಸಚಿವಾಲಯ**

**ವಿಷಯ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಹುಡ್ಕೋದಿಂದ ಪಡೆದ ಸಾಲಕ್ಕೆ 2010ರ ಮಾರ್ಚ್ ತಿಂಗಳಿಗೆ ತ್ರೈಮಾಸಿಕ ಅಸಲು ಮತ್ತು ಬಡ್ಡಿ ಬಿಡುಗಡೆ ಬಗ್ಗೆ.

**ಓದಲಾಗಿದೆ :** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಪತ್ರ ಸಂಖ್ಯೆ : ಕೆಆರ್‌ಡಿಸಿಎಲ್/ಎಂ.ಡಿ./2009–10/2810 ದಿನಾಂಕ 28–01–2010.

**ಪ್ರಸ್ತಾವನೆ :**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಕೈಗೊಳ್ಳುತ್ತಿರುವ ಯೋಜನೆಗಳಿಗಾಗಿ ವಿವಿಧ ಸ್ಕೀಂಗಳ ಅಡಿಯಲ್ಲಿ ಹುಡ್ಕೋದಿಂದ ಪಡೆದ ಸಾಲವು ಈವರೆಗೆ ಒಟ್ಟು 4119830408/–ರೂ.ಗಳು ದಿನಾಂಕ 31–03–2010ರ ಅಂತ್ಯಕ್ಕೆ ಬಾಕಿ ಇರುತ್ತದೆ. ಓದಲಾದ ದಿನಾಂಕ 28–01–2010ರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ, 2010ರ ಮಾರ್ಚ್ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕಕ್ಕೆ ಮೇಲಿನ ಸಾಲದ ಮರುಪಾವತಿಗೆ ಆಸಲು ಹಾಗೂ ಬಡ್ಡಿ ಅನುಕ್ರಮವಾಗಿ 141499000/– ರೂಗಳು ಮತ್ತು 85630091/– ರೂಗಳು ಒಟ್ಟು ಮೊತ್ತ 227129091/– ರೂ.ಗಳನ್ನು ಹುಡ್ಕೋಗೆ ಪಾವತಿಸಬೇಕಾಗಿದೆಯೆಂದು ವರದಿ ಮಾಡಲಾಗಿದೆ. ಈಗ ಬಾಕಿ ಇರುವ ಮೊತ್ತ 227129091/–ರೂ.ಗಳನ್ನು ಬಿಡುಗಡೆ ಮಾಡಿ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದ್ದು, ಕೆಳಗಿನಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 11 ಇಎಪಿ 2009, ಬೆಂಗಳೂರು, ದಿನಾಂಕ : 20–03–2010**

ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಹುಡ್ಕೋದಿಂದ ಪಡೆದುಕೊಂಡಿರುವ ಸಾಲದ ಬಾಬತ್ತಿಗೆ 2010ರ ಮಾರ್ಚ್ ತಿಂಗಳಿಗೆ ಕೊನೆಗೊಳ್ಳುವ ತ್ರೈಮಾಸಿಕ ಅವಧಿಗೆ ಅಸಲು ಹಾಗೂ ಬಡ್ಡಿ ಸೇರಿ ಒಟ್ಟು 227129091/– ರೂ.ಗಳನ್ನು (ಇಪ್ಪತ್ತೆರಡು ಕೋಟಿ ಎಪ್ಪತ್ತೊಂದು ಲಕ್ಷದ ಇಪ್ಪತ್ತೊಂಬತ್ತು ಸಾವಿರದ ತೊಂಬತ್ತೊಂದು ರೂಪಾಯಿಗಳು ಮಾತ್ರ) ಲೆಕ್ಕ ಶೀರ್ಷಿಕೆ "5054–80—190–0–01–240 (ಯೋಜನೇತರ) ಸಾಲ ಮೇಲುಸ್ತುವಾರಿ" ಅಡಿಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಲು ಆದೇಶಿಸಲಾಗಿದೆ.

ಸದರಿ ಬಿಲ್ಲಿನ ಮೊತ್ತಕ್ಕೆ ನಿರ್ದೇಶಕರು (ಆರ್ಥಿಕ) ಹಾಗೂ ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಲೋಕೋಪಯೋಗಿ, ಬಂದರು ಹಾಗೂ ಒಳನಾಡು ಜಲಸಾರಿಗೆ ಇಲಾಖೆ ಇವರ ಮೇಲುರುಜು ಮಾಡಿಸುವುದು ಹಾಗೂ ಈ ಬಿಲ್ಲನ್ನು (ಸ್ವೀಕೃತದ ರಶೀದಿ) ರಾಜ್ಯ ಹುಜೂರ್ ಖಜಾನೆ, ಬೆಂಗಳೂರು ಇಲ್ಲಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಲೋಇ 188 ಆಕೋ–1/10 ದಿನಾಂಕ 19–03–2010ರಲ್ಲಿನ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ದೇವಿಪ್ರಸಾದ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಲೋಕೋಪಯೋಗಿ, ಬಂದರು ಹಾಗೂ ಒಳನಾಡು

ಜಲಸಾರಿಗೆ ಇಲಾಖೆ (ಇಎಪಿ)

ಪಿ.ಆರ್. 875

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ**

**ವಿಷಯ :** ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2009–10 ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂ. ಗ್ರಾಅಪ 4 ಡಬ್ಲ್ಯೂಜಿಪಿ 09, ದಿನಾಂಕ : 13–4–2009
2. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂಖ್ಯೆ : ಪಿಸಿ(ಪಿ) 19/125/ಕೆಎಆರ್/2009–ಡಬ್ಲ್ಯೂಜಿಎಸ್ ದಿನಾಂಕ : 6–11–2009
3. ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂಖ್ಯೆ : ಪಿಸಿ(ಪಿ) 19/320/ಎಸ್‌ಸಿಎ/2009–ಡಬ್ಲ್ಯೂಜಿಎಸ್ ದಿನಾಂಕ : 10–3–2010
4. ಆರ್ಥಿಕ ಇಲಾಖೆಯ ಜಮಾ ಧೃಢೀಕರಣ ಪತ್ರ ಸಿಸಿಎಸ್ ಸಂಖ್ಯೆ : ಎಫ್‌ಡಿ 13 ಬಿಜಿಎಲ್ 2009, ದಿನಾಂಕ 19–3–2010.

**ಪ್ರಸ್ತಾವನೆ :**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನವನ್ನು ಮೇಲೆ ಓದಲಾದ ಪತ್ರ (1) ರಂತೆ 2009–10ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಭಾರತ ಸರ್ಕಾರದ ಯೋಜನಾ ಆಯೋಗದ ಪಶ್ಚಿಮ ಘಟ್ಟಗಳ ಸಚಿವಾಲಯವು ಮೇಲೆ ಓದಲಾದ

ಪತ್ರ (2)ರಲ್ಲಿ ಈ ಕಾರ್ಯಕ್ರಮದ ಅನುಷ್ಠಾನ ಕಾರ್ಯವನ್ನು 2009–10ನೇ ಸಾಲಿನಲ್ಲಿ ಮುಂದುವರೆಸುವ ಸಲುವಾಗಿ ರಾಜ್ಯಕ್ಕೆ ಹಂಚಿಕೆ ಮಾಡಿರುವ ವಿಶೇಷ ಕೇಂದ್ರ ಅನುದಾನ ರೂ. 2924.00 ಲಕ್ಷಗಳ ವಾರ್ಷಿಕ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿರುತ್ತದೆ. ಇದರಲ್ಲಿ ಶೇ. 90 ಭಾಗ ಅಂದರೆ ರೂ. 2631.60 ಲಕ್ಷ ಕೇಂದ್ರ ಸರ್ಕಾರ ಬಿಡುಗಡೆ ಮಾಡಲಿರುವ ನಿಧಿ ರೂಪದ್ದಾಗಿದ್ದು, ಉಳಿಕೆ ಶೇ. 10 ಭಾಗ ಅಂದರೆ ರೂ. 292.40 ಲಕ್ಷ ರಾಜ್ಯದ ಪಾಲಾಗಿರುತ್ತದೆ. ಆ ಸಚಿವಾಲಯವು ಮೇಲೆ ಓದಲಾದ ಪತ್ರ (3) ರಲ್ಲಿ ಪ್ರಸ್ತುತ ಸಾಲಿನ ಒಟ್ಟಾರೆ ಅನುದಾನ ರೂ. 2924.00 ಲಕ್ಷ ಪೈಕಿ ಶೇ 90 ರಷ್ಟು ಅಂದರೆ ರೂ. 2631.60 ಲಕ್ಷ ಆಗಲಿದ್ದು, ಅದರಲ್ಲಿ 2 ನೇ ಮತ್ತು ಅಂತಿಮ ಕಂತಿನ ಬಾಬ್ತು ಶೇ 25 ಅಂದರೆ ರೂ. 657.90 ಲಕ್ಷಗಳನ್ನು ರಾಜ್ಯಕ್ಕೆ ಬಿಡುಗಡೆ ಮಾಡಿದೆ. ಈ ಅನುದಾನವು ರಾಜ್ಯ ಸರ್ಕಾರದ ಖಾತೆಗೆ ಜಮಾ ಆಗಿರುವ ಬಗ್ಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ ಪತ್ರ (4) ರಂತೆ ಜಮಾ ಧೃಢೀಕರಣ ಪತ್ರವನ್ನು ನೀಡಿರುತ್ತದೆ. ಈ ಅನುದಾನದ ಜೊತೆಗೆ ರಾಜ್ಯದ ಪಾಲಿನ ಶೇ. 10 ಅನುದಾನವಾದ ರೂ. 73.10 ಲಕ್ಷ ಮತ್ತು ಈಗಾಗಲೇ ಬಿಡುಗಡೆ ಮಾಡಿರುವ ಮೊದಲನೆ (1ನೇ) ಕಂತಿನಲ್ಲಿ ರಾಜ್ಯದ ಪಾಲಿನ ಉಳಿಕೆ ಅನುದಾನ ರೂ. 40.57 ಲಕ್ಷಗಳನ್ನೂ ಸೇರಿಸಿ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದರೆ 2009–10ನೇ ಸಾಲಿನ ಆಯವ್ಯಯದಲ್ಲಿ ಈ ಕಾರ್ಯಕ್ರಮಕ್ಕಾಗಿ ಹಂಚಿಕೆಯಾದ ರೂ. 2632.00 ಲಕ್ಷಗಳಲ್ಲಿ ಈಗಾಗಲೇ ಒಂದನೆ ಕಂತಿನ ಅನುದಾನ ರೂ. 1945.88 ಲಕ್ಷಗಳನ್ನು ಬಿಡುಗಡೆ ಮಾಡಿರುವುದರಿಂದ ಪ್ರಸ್ತುತ ಆಯವ್ಯಯ ಹಂಚಿಕೆಯಲ್ಲಿ ಲಭ್ಯವಿರುವ ರೂ. 686.12 ಲಕ್ಷಗಳನ್ನು ರಾಜ್ಯದ ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ಗಳಿಗೆ ಪ್ರಸಕ್ತ ಸಾಲಿನ 2ನೇ ಕಂತಿನ ಭಾಗಶಃ ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 1 ಪಘಯೋ 2009 (ಭಾಗ–1), ಬೆಂಗಳೂರು, ದಿನಾಂಕ: 23–3–2010**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2009–10ನೇ ಸಾಲಿನಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಎರಡನೇ ಕಂತಿನ ವಿಶೇಷ ಕೇಂದ್ರ ಅನುದಾನ ರೂ. 657.90 ಲಕ್ಷ ಮತ್ತು ರಾಜ್ಯದ ಪಾಲಿನ ಶೇ. 10 ಅನುದಾನವಾದ ರೂ. 73.10 ಲಕ್ಷಗಳ ಪೈಕಿ ರೂ. 34.97 ಲಕ್ಷಗಳನ್ನು ಸೇರಿಸಿ ಒಟ್ಟಾರೆ ರೂ. 693.62 ಲಕ್ಷಗಳಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಯೋಜನಾ ಕೋಶಕ್ಕೆ ರೂ. 7.50 ಲಕ್ಷ ಅನುದಾನ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಅನುದಾನ ರೂ. 686.12 ಲಕ್ಷಗಳನ್ನು (ರೂ. ಆರು ಕೋಟಿ ಎಂಬತ್ತಾರು ಲಕ್ಷ ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ರಾಜ್ಯದ 11 ಜಿಲ್ಲಾ ಪಂಚಾಯತಿಗಳಿಗೆ ಅನುಬಂಧ–1ರಲ್ಲಿ ತೋರಿಸಿರುವಂತೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. 2009–10ನೇ ಸಾಲಿನಲ್ಲಿ ನಿಮ್ಮ ಜಿಲ್ಲೆಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಮಾತ್ರ ನಿಮ್ಮ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನಕ್ಕೊಳಪಟ್ಟು ಅನುಷ್ಠಾನಗೊಳಿಸುವುದು.
2. ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಹೊರಡಿಸುತ್ತಿರುವ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸುವುದು.
3. ಒಂದು ವಲಯಕ್ಕೆ ನಿಗದಿಪಡಿಸಿರುವ ಅನುದಾನವನ್ನು ಇನ್ನೊಂದು ವಲಯಕ್ಕೆ ಯಾವುದೇ ಕಾರಣಕ್ಕೂ ವರ್ಗಾಯಿಸಬಾರದು.
4. ಹಾಲಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಅನುಮೋದಿತ ಕ್ರಿಯಾ ಯೋಜನೆಯಲ್ಲಿನ ಮುಂದುವರೆದ ಅಪೂರ್ಣ ಕಾಮಗಾರಿಗಳಿಗೆ ಪ್ರಥಮ ಆದ್ಯತೆ ನೀಡಿ ಪೂರ್ಣಗೊಳಿಸತಕ್ಕದ್ದು. ಆನಂತರ ತೋಟಗಾರಿಕೆ ಹಾಗೂ ಅರಣ್ಯೀಕರಣ ಕಾಮಗಾರಿಗಳಿಗೆ ಆದ್ಯತೆ ನೀಡಿ ಅನುಮೋದನೆಯಾಗಿರುವ ಹೊಸ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಅನುಷ್ಠಾನಗೊಳಿಸುವುದು.
5. ಸಾಂಬಾರು ಮಂಡಳಿಯ ಕಾರ್ಯಕ್ರಮಗಳಿಗೆ ಪ್ರಸ್ತುತ ಕಂತಿನಲ್ಲಿ ಒದಗಿಸಿರುವ ಅನುದಾನ ರೂ. 4.95 ಲಕ್ಷಗಳನ್ನು ಆ ಮಂಡಳಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯು ಬಿಡುಗಡೆ ಮಾಡುವುದು.
6. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲೇ ಪ್ರತಿ ತ್ರೈಮಾಸಿಕ ವರದಿಯನ್ನು ಸಕಾಲಕ್ಕೆ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವುದು. (Statement-I-Financial, Statement-II-Physical, verification report for beneficiary oriented schemes, verification report for schemes relating to construction works).
7. ಜಿಲ್ಲಾ ಪಂಚಾಯತಿಯ ಮುಖ್ಯ ಲೆಕ್ಕಾಧಿಕಾರಿಗಳು ಸಹಾಯಾನುದಾನದ ಬಿಲ್ಲಿನ ಮೇಲೆ ನಿಯಮಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಖಜಾನೆಯಿಂದ ಪಡೆದು, ಅನುಷ್ಠಾನಾಧಿಕಾರಿಗಳಿಗೆ ಬಿಡುಗಡೆ ಮಾಡುವುದು.

2551–ಗುಡ್ಡಗಾಡು ಪ್ರದೇಶಗಳು–01–ಪಶ್ಚಿಮ ಘಟ್ಟಗಳು–001–ನಿರ್ದೇಶನ ಮತ್ತು ಆಡಳಿತ–0–01–ಯೋಜನಾಕೋಶ–059–ಇತರೆ ಖರ್ಚು (ಯೋಜನೆ) (2551-01-001-0-01-059).

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ. ಗ್ರಾಅಪ 77 ಪಿಬಿಎಸ್ 2010, ದಿನಾಂಕ 23–3–2010 ರಲ್ಲಿ ಸಹಮತಿಸಿದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
(ಡಾ॥ ಪಿ.ಸಿ. ಜಾಫರ್)
ನಿರ್ದೇಶಕರು, ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ
ಘಟಕ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ಅನುಬಂಧ–1**

**ಸರ್ಕಾರದ ಆದೇಶದ ಸಂ. ಗ್ರಾಅಪ 1 ಪಘಯೋ 2009 (ಭಾಗ–1) ಬೆಂಗಳೂರು, ದಿನಾಂಕ : 23–3–2010**

**ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2009–10ನೇ ಸಾಲಿನ ಜಿಲ್ಲಾವಾರು ಎರಡನೇ ಕಂತಿನ ಅನುದಾನ ಬಿಡುಗಡೆ ತಃಖ್ತೆ (ರೂ. ಲಕ್ಷಗಳಲ್ಲಿ)**

| ಕ್ರ.ಸಂ. | ಜಿಲ್ಲೆಯ ಹೆಸರು | 2009–10ನೇ ಸಾಲಿನ ಜಿಲ್ಲಾವಾರು ಅನುದಾನ ಹಂಚಿಕೆ | ವಿಶೇಷ ಕೇಂದ್ರ ಅನುದಾನ | ರಾಜ್ಯ ಪಾಲಿನ ಭಾಗಶಃ ಅನುದಾನ | ಜಿಲ್ಲೆಗಳಿಗೆ ಬಿಡುಗಡೆ ಮಾಡಲಾಗುತ್ತಿರುವ ಎರಡನೇ ಕಂತಿನ ಒಟ್ಟು ಅನುದಾನ (ಕೇಂದ್ರ + ರಾಜ್ಯ) | ಕಾಲಂ 6ರ ಪೈಕಿ ಸಾಂಬಾರು ಮಂಡಳಿಗೆ ಬಿಡುಗಡೆ ಆಗಿರುವ ಅನುದಾನ | ಬಿಡುಗಡೆಗೆ ಬಾಕಿ ಇರುವ ಅನುದಾನ | | |
|---|---|---|---|---|---|---|---|---|---|
| | | | | | | | 1ನೇ ಕಂತಿನ ರಾಜ್ಯ ಪಾಲಿನ ಬಾಕಿ ಅನುದಾನ | 2ನೇ ಕಂತಿನ ರಾಜ್ಯ ಪಾಲಿನ ಬಾಕಿ ಅನುದಾನ | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 |
| 1. | ಬೆಳಗಾಂ | 467.75 | 105.24 | 5.65 | 110.89 | – | 6.50 | 6.04 | 12.54 |
| 2. | ಚಾಮರಾಜನಗರ | 86.20 | 19.40 | 1.04 | 20.44 | – | 1.19 | 1.12 | 2.31 |
| 3. | ಚಿಕ್ಕಮಗಳೂರು | 276.35 | 62.18 | 3.34 | 65.52 | 1.03 | 3.84 | 3.57 | 7.41 |
| 4. | ದಕ್ಷಿಣ ಕನ್ನಡ | 206.30 | 46.42 | 2.49 | 48.91 | – | 2.86 | 2.67 | 5.53 |
| 5. | ಧಾರವಾಡ | 67.20 | 15.12 | 0.81 | 15.93 | – | 0.93 | 0.87 | 1.80 |
| 6. | ಹಾಸನ | 221.65 | 49.87 | 2.68 | 52.55 | 0.93 | 3.07 | 2.86 | 5.93 |
| 7. | ಕೊಡಗು | 247.90 | 55.78 | 3.00 | 58.78 | 0.75 | 3.44 | 3.20 | 6.64 |
| 8. | ಮೈಸೂರು | 96.95 | 21.81 | 1.17 | 22.98 | – | 1.34 | 1.25 | 2.59 |
| 9. | ಶಿವಮೊಗ್ಗ | 410.45 | 92.35 | 4.96 | 97.31 | 1.27 | 5.70 | 5.30 | 11.00 |
| 10. | ಉಡುಪಿ | 296.85 | 66.79 | 3.59 | 70.38 | – | 4.12 | 3.83 | 7.95 |
| 11. | ಉತ್ತರ ಕನ್ನಡ | 516.40 | 116.19 | 6.24 | 122.43 | 0.97 | 7.17 | 6.67 | 13.84 |
| | ಒಟ್ಟು | 2894.00 | 651.15 | 34.97 | 686.12 | 4.95 | 40.16 | 37.38 | 77.54 |
| 12. | ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ ಯೋಜನಾ ಕೋಶ | 30.00 | 6.75 | 0.75 | 7.50 | 0.00 | 0.41 | 0.00 | 0.41 |
| | ಜುಮ್ಲಾ | 2924.00 | 657.90 | 35.72 | 693.62 | 4.95 | 40.57 | 37.38 | 77.95 |

(ಡಾ॥ ಪಿ.ಸಿ. ಜಾಫರ್)
ನಿರ್ದೇಶಕರು, ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ
ಘಟಕ ಹಾಗೂ ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಪಿ.ಆರ್. 881

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ವಿಷಯ :** ಶ್ರೀ ಬಿ. ಸದಾನಂದ ಆಚಾರ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಶಿಗ್ಗಾಂ ಅವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕುವ (Discharge) ಬಗ್ಗೆ.

**ಓದಲಾಗಿದೆ :** ಪತ್ರ ಸಂಖ್ಯೆ : ಸಿಬ್ಬಂದಿ/1/75/2008–09, ದಿನಾಂಕ : 13–2–2009 ಮತ್ತು 20–11–2009.

**ಪ್ರಸ್ತಾವನೆ :**

ಮೀನುಗಾರಿಕೆ ನಿರ್ದೇಶಕರು, ಬೆಂಗಳೂರುರವರು ಮೇಲೆ ಓದಲಾದ ಪತ್ರಗಳಲ್ಲಿ ಶ್ರೀ ಬಿ. ಸದಾನಂದ ಆಚಾರ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಶಿಗ್ಗಾಂರವರು ದಿನಾಂಕ 17–3–2005 ರಂದು ಸರ್ಕಾರಿ ಸೇವೆಗೆ ಸೇರಿದ್ದು, ಸದರಿಯವರು ದಿನಾಂಕ : 10–10–2005 ರಿಂದ 9–1–2006 ರವರೆಗೆ ಅಸಾಧಾರಣ ರಜೆಯ ಮೇಲೆ ತೆರಳಿ ತದನಂತರ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಾದ ಕಾರಣ ಸದರಿಯವರ ವಿರುದ್ದ ಕೆ.ಸಿ.ಎಸ್. (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 11ರಡಿ ಶಿಸ್ತು ಕ್ರಮ ಪ್ರಾರಂಭಿಸಿ ನೋಟಿಸ್ ಜಾರಿಗೊಳಿಸಲಾಗಿತ್ತೆಂದು, ನೋಟಿಸ್‌ಗೆ ಆಪಾದಿತರು ನೀಡಿದ ಹೇಳಿಕೆ ಸಮಂಜಸವಾಗಿಲ್ಲದ ಕಾರಣ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಎಲ್.ಸಿ. ಲಕ್ಷ್ಮೀನರಸಿಂಹಯ್ಯನವರನ್ನು ವಿಚಾರಣಾಧಿಕಾರಿಯನ್ನು ನೇಮಿಸಲಾಗಿ ಆಪಾದಿತರ ವಿರುದ್ದ ಮಾಡಲಾಗಿದ್ದ ಆರೋಪ ಸಾಬೀತಾಗಿದೆ ಎಂದು ವಿಚಾರಣಾಧಿಕಾರಿ ವರದಿಯನ್ನು ದಿನಾಂಕ : 3–10–2008 ರಂದು ನೀಡಿರುತ್ತಾರೆಂದು ತಿಳಿಸಿರುತ್ತಾರೆ. ತದನಂತರ ದಿನಾಂಕ : 25–10–2008ರ 2ನೇ ಕಾರಣ ಕೇಳುವ ನೋಟಿಸ್‌ನೊಂದಿಗೆ ವಿಚಾರಣಾ ವರದಿಯ ಪ್ರತಿಯನ್ನು ಆಪಾದಿತರಿಗೆ ಜಾರಿ ಮಾಡಿ ಹೇಳಿಕೆ ನೀಡುವಂತೆ ಕೋರಲಾಗಿದೆ. ಇದಕ್ಕೆ ಉತ್ತರವಾಗಿ ಆಪಾದಿತ ಅಧಿಕಾರಿ ದಿನಾಂಕ : 19–11–2008 ರಂದು ಮೀನುಗಾರಿಕೆ ನಿರ್ದೇಶಕರಿಗೆ ಹೇಳಿಕೆ/ಮನವಿ ಸಲ್ಲಿಸಿ ವೈಯಕ್ತಿಕ ಹಾಗೂ ಕೌಟುಂಬಿಕ ಕಾರಣಗಳಿಂದ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವುದು ಕಷ್ಟಸಾಧ್ಯವಾದುದರಿಂದ ದಿನಾಂಕ 20–8–2008 ರಂದು ಹುದ್ದೆಗೆ ರಾಜೀನಾಮೆ ನೀಡಿರುವುದಾಗಿ ತಿಳಿಸುತ್ತಾ, ಸದರಿ ರಾಜೀನಾಮೆಯನ್ನು ಅಂಗೀಕರಿಸಿ ಕರ್ತವ್ಯದಿಂದ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ.

ಶ್ರೀ ಬಿ. ಸದಾನಂದ ಆಚಾರ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಶಿಗ್ಗಾಂರವರು ಕರ್ತವ್ಯಕ್ಕೆ ಹಾಜರಾದ ನಂತರ ಕೇವಲ 6 ತಿಂಗಳು 24 ದಿವಸಗಳ ಸೇವೆ ಸಲ್ಲಿಸಿದ್ದು, ತದನಂತರ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ಇಲಾಖಾ ವಿಚಾರಣೆಯಲ್ಲಿಯೂ ಸಹ ಸಾಬೀತಾಗಿರುವುದರಿಂದ ಈ ರೀತಿ ಪರೀಕ್ಷಾರ್ಥ ಅವಧಿಯಲ್ಲಿಯೇ ಅನಧಿಕೃತ ಗೈರು ಹಾಜರಾಗಿ ಕರ್ತವ್ಯಲೋಪ ಎಸಗಿರುವುದರ ಜೊತೆಗೆ ದುರ್ವರ್ತನೆ ತೋರಿರುವುದು ಅವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವ ಆಸಕ್ತಿ ಇಲ್ಲವೆಂದು ತೋರಿಸುತ್ತದೆ. ಇದರಿಂದಾಗಿ ಶ್ರೀ ಬಿ. ಸದಾನಂದ ಆಚಾರ್ಯರವರನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಕೆಳಕಂಡ ಆದೇಶ.

**ಆದೇಶ ಸಂಖ್ಯೆ: ಪಸಂಮೀ 48 ಮೀಇಸೇ 2009, ಬೆಂಗಳೂರು, ದಿನಾಂಕ: 24–3–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಶ್ರೀ ಬಿ. ಸದಾನಂದ ಆಚಾರ್ಯ, ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ–2), ಶಿಗ್ಗಾಂರವರು ಪರೀಕ್ಷಾರ್ಥ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿ ದುರ್ವರ್ತನೆ ತೋರಿ ಕರ್ತವ್ಯಲೋಪ ಎಸಗಿರುವುದು ದೃಢಪಟ್ಟಿರುವುದರಿಂದ, ಸದರಿಯವರು ಸರ್ಕಾರಿ ಸೇವೆಗೆ ಅನರ್ಹರು ಎಂದು ಪರಿಗಣಿಸಿ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 6(1) ರನ್ವಯ ಇವರು ಗೈರು ಹಾಜರಾದ ದಿನಾಂಕ : 10–1–2006 ರಿಂದಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲಾಗಿದೆ. (Discharge).

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಡಿ.ಎಂ. ರಾಜಣ್ಣ)

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ)

ಪಿ.ಆರ್. 882

**ಕಂದಾಯ ಸಚಿವಾಲಯ**

**ವಿಷಯ :** ಬಾಗಲುಕೋಟೆ, ದಾವಣಗೆರೆ, ವಿಜಾಪುರ ಮತ್ತು ಬೆಂಗಳೂರು ಗ್ರಾಮಾಂತರ ಜಿಲ್ಲೆಗಳ ಮಾಜಿ ಅನುವಂಶಿಕ ಪಟೇಲರುಗಳಿಗೆ ಬಾಕಿ ಇರುವ ಅನುಕಂಪ ಭತ್ಯೆ ಅನುದಾನವನ್ನು ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಕಂಇ 41 ಎಂವಿಎಸ್ 2001, ದಿನಾಂಕ : 19–10–2007
2. ಜಿಲ್ಲಾಧಿಕಾರಿಯವರ ಬಾಗಲಕೋಟೆ ಇವರ ಪತ್ರ ಸಂಖ್ಯೆ : ಸಿವಿ : ಲೇಪ 2 : ಆಡಳಿತ : ಸಿಆರ್ : 57/07–08, ದಿನಾಂಕ : 5–2–2010.
3. ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ಪತ್ರ ಸಂಖ್ಯೆ : ಹೆಚ್‌ಓಎ/ಸಿಆರ್.26/2008–09, ದಿನಾಂಕ : 2–7–2009.
4. ಜಿಲ್ಲಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರ ಪತ್ರ ಸಂಖ್ಯೆ : ಹೆಚ್‌ಓಎ/ಸಿಆರ್.23/2007–08, ದಿನಾಂಕ : 31–3–2008.
5. ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರ ಪತ್ರ ಸಂಖ್ಯೆ : ಪ್ರಾಆಬೆ. ಭೂಮಿ II : WTN ಸಿಆರ್ 43/2009–10, ದಿನಾಂಕ : 28–1–2010.
6. ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಪತ್ರ ಸಂಖ್ಯೆ : ವಿಓಎ:ಸಿಆರ್ 37/2007–08, ದಿನಾಂಕ : 4–2–2010

**ಪ್ರಸ್ತಾವನೆ :**

ಮಾಜಿ ಅನುವಂಶಿಕ ಪಟೇಲರಿಗೆ ಅನುಕಂಪ ಭತ್ಯೆಯನ್ನು ದಿನಾಂಕ : 1–8–1979 ರಿಂದ 14–8–1984 ರವರೆಗೆ ರೂ. 100 ರಂತೆ ಹಾಗೂ ದಿನಾಂಕ 1–7–1990 ರಿಂದ 8–10–1991 ರವರೆಗೆ ರೂ. 500/– ಗಳಂತೆ ಪಾವತಿಸುವ ಕುರಿತು ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿ ರಾಜ್ಯದ ಎಲ್ಲಾ ಮಾಜಿ ಪಟೇಲರುಗಳಿಗೆ ಅನ್ವಯವಾಗುವಂತೆ 1071 ಲಕ್ಷ ರೂ. (ಒಂದು ಸಾವಿರದ ಎಪ್ಪತ್ತೊಂದು ಲಕ್ಷ ರೂ.ಗಳು ಮಾತ್ರ) ಗಳನ್ನು ಬಿಡುಗಡೆ ಮಾಡಿ ಸರ್ಕಾರವು ಆದೇಶ ಹೊರಡಿಸಲಾಗಿತ್ತು. ಸದರಿ ಆದೇಶದಂತೆ ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ 7 ಜನ ಮಾಜಿ ಪಟೇಲರುಗಳಿಗೆ ಅನುಕಂಪ ಭತ್ಯೆಯನ್ನು ರೂ. 2,55,500/– ಗಳನ್ನು ಬಾಕಿ ಅನುಕಂಪ ಭತ್ಯೆಯಾಗಿ ಪಾವತಿಸುವ ಕುರಿತು ಜಿಲ್ಲಾಧಿಕಾರಿ, ಬಾಗಲಕೋಟೆ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಪ್ರಸ್ತಾವನೆ ಸಲ್ಲಿಸಿ, ಸರ್ಕಾರದ ಸ್ಪಷ್ಟನೆ ಕೋರಿರುತ್ತಾರೆ.

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದ ಮೂಲಕ ಸರ್ಕಾರವು ದಾವಣಗೆರೆ ಜಿಲ್ಲೆಗೆ ಬಿಡುಗಡೆ ಮಾಡಿದ 39.00 ಲಕ್ಷ ರೂ.ಗಳಲ್ಲಿ ಸದರಿ ಜಿಲ್ಲೆಯ ಮಾಜಿ ಪಟೇಲರುಗಳು ಸೂಕ್ತ ದಾಖಲೆಗಳನ್ನು ನೀಡದ ಕಾರಣ, 19,58,367/– ರೂ.ಗಳನ್ನು ಕ್ರಮ ಸಂಖ್ಯೆ (4) ರ ಮೇರೆಗೆ ಅಧ್ಯರ್ಪಣೆ (Surrender) ಮಾಡಲಾಗಿದೆ ಎಂದು, ಮೇಲೆ ಓದಲಾದ ಕ್ರಮಸಂಖ್ಯೆ (3) ರಲ್ಲಿ ಸಲ್ಲಿಸಿರುವ ಪ್ರಸ್ತಾವನೆಯಲ್ಲಿ ತಿಳಿಸಿದ್ದು, ಅದರಂತೆ ದಾವಣಗೆರೆ ಜಿಲ್ಲೆಯ 54 ಜನ ಮಾಜಿ ಪಟೇಲರುಗಳಿಗೆ 11,78,893/– ರೂ.ಗಳನ್ನು ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದ ಮೂಲಕ ಬಿಜಾಪುರ ಜಿಲ್ಲೆಗೆ ಬಿಡುಗಡೆ ಮಾಡಲಾದ ಅನುದಾನದಲ್ಲಿ ಬಿಜಾಪುರ ಜಿಲ್ಲೆಯ 4 ತಾಲ್ಲೂಕುಗಳಾದ ಬಿಜಾಪುರ, ಬಸವನಬಾಗೇವಾಡಿ, ಇಂಡಿ, ಸಿಂದಗಿಗಳಲ್ಲಿ ಮಾಜಿ ಪಟೇಲರುಗಳಿಗೆ ಪಾವತಿಸಲು ಅನುದಾನದ ಕೊರತೆಯಾಗಿದ್ದು, ಅದರಂತೆ 8,03,075.00 ರೂ. ಗಳನ್ನು ಬಿಜಾಪುರ ಜಿಲ್ಲೆಗೆ ಬಿಡುಗಡೆ ಮಾಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (5) ರಂತೆ ಪ್ರಾದೇಶಿಕ ಆಯುಕ್ತರು, ಬೆಳಗಾವಿ ವಿಭಾಗ, ಬೆಳಗಾವಿ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ಬಿಡುಗಡೆ ಮಾಡಲಾಗಿದ್ದ ಅನುದಾನದಲ್ಲಿ ದೊಡ್ಡಬಳ್ಳಾಪುರ ತಾಲ್ಲೂಕಿನ ತಹಶೀಲ್ದಾರರು ರೂ. 8,24,390/– ಗಳನ್ನು ಅಪವ್ಯಯ (lapse) ವಾಗಿರುತ್ತದೆ. ಆದ್ದರಿಂದ ಸದರಿ ಮೊತ್ತವನ್ನು ಬಿಡುಗಡೆ ಮಾಡುವಂತೆ ಕೋರಿ ಮೇಲೆ ಓದಲಾದ ಕ್ರಮ ಸಂಖ್ಯೆ (6) ರಲ್ಲಿ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಈ ಮೇಲಿನ ಜಿಲ್ಲಾಧಿಕಾರಿಗಳ/ಪ್ರಾದೇಶಿಕ ಆಯುಕ್ತರ ಪ್ರಸ್ತಾವನೆಗಳನ್ನು ಪರಿಶೀಲಿಸಿದ ನಂತರ, ಮಾಜಿ ಪಟೇಲರುಗಳಿಗೆ ನೀಡುವ ಅನುಕಂಪ ಭತ್ಯೆ ಬಾಕಿ ಅನುದಾನವನ್ನು ಬಿಡುಗಡೆ ಮಾಡುವ ಕುರಿತು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 51 ಎಂವಿಎಸ್ 2010, ಬೆಂಗಳೂರು, ದಿನಾಂಕ: 23–3–2010**

ಮೇಲಿನ ಪ್ರಸ್ತಾವನೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಮಾಜಿ ಅನುವಂಶಿಕ ಪಟೇಲರುಗಳಿಗೆ ಬಾಕಿ ಹಣವನ್ನು ಮಂಜೂರು ಮಾಡುವ ಕುರಿತು ಬಾಗಲಕೋಟೆ ಜಿಲ್ಲೆಯ ಮುಧೋಳ ತಾಲ್ಲೂಕಿನ 7 ಜನ ಮಾಜಿ ಪಟೇಲರುಗಳಿಗೆ ಕೋರಲಾಗಿದ್ದ ರೂ. 2,55,500/–ಗಳಲ್ಲಿ ದಿನಾಂಕ : 1–8–1979 ರಿಂದ 14–8–1984 ರವರೆಗೆ ಪ್ರತಿ ತಿಂಗಳಿಗೆ ರೂ. ಪ್ರತಿಯೊಬ್ಬರಿಗೆ ರೂ. 100/– ರಂತೆ 61 ತಿಂಗಳಿಗೆ ತಲಾ ಒಬ್ಬರಿಗೆ 6,100/– ರೂ. ನಂತೆ 7 ಜನ ಮಾಜಿ

ಪಟೇಲರುಗಳಿಗೆ ಒಟ್ಟು ರೂ. 42,700/– ಹಾಗೂ ದಿನಾಂಕ : 1–7–1990 ರಿಂದ 8–10–1991 ವರೆಗೆ ಪ್ರತಿ ತಿಂಗಳಿಗೆ ಪ್ರತಿಯೊಬ್ಬರಿಗೆ ರೂ. 500/– ರಂತೆ 15 ತಿಂಗಳಿಗೆ ತಲಾ ಒಬ್ಬರಿಗೆ ರೂ. 7500 ರಂತೆ 7 ಜನ ಮಾಜಿ ಪಟೇಲರುಗಳಿಗೆ ಒಟ್ಟು 52,500/–ರೂ.ಗಳನ್ನು ಅಂತೆಯೇ ಎರಡು ಕಾಲಾವಧಿಗಳಿಗೆ ಸೇರಿಸಿ 7 ಜನ ಮಾಜಿ ಪಟೇಲರುಗಳಿಗೆ ಒಟ್ಟು ರೂ. 95,200/– (ತೊಂಬತ್ತೈದು ಸಾವಿರದ ಇನ್ನೂರು ಮಾತ್ರ) ಗಳನ್ನು ಪಡೆಯಲು ಅರ್ಹರಿರುವುದರಿಂದ ಪಾವತಿಸಲು ಸ್ಪಷ್ಟೀಕರಣ ನೀಡಿ ರೂ. 95,200/– ಗಳನ್ನು ಸರ್ಕಾರವು ಅನುದಾನ ಬಿಡುಗಡೆ ಮಾಡಿ ಆದೇಶಿಸಿದೆ.

ದಾವಣಗೆರೆ ಜಿಲ್ಲೆಯ 54 ಜನ ಮಾಜಿ ಪಟೇಲರುಗಳಿಗೆ ಕೋರಲಾದ ರೂ. 11,78,893/– (ಹನ್ನೊಂದು ಲಕ್ಷದ ಎಪ್ಪತ್ತೆಂಟು ಸಾವಿರದ ಎಂಟುನೂರ ತೊಂಬತ್ತು ಮೂರು ಮಾತ್ರ) ಗಳನ್ನು ಸರ್ಕಾರವು ಅನುದಾನ ಬಿಡುಗಡೆ ಮಾಡಿ ಆದೇಶಿಸಿದೆ.

ವಿಜಾಪುರ ಜಿಲ್ಲೆಯ 4 ತಾಲ್ಲೂಕುಗಳ ಮಾಜಿ ಪಟೇಲರುಗಳಿಗೆ ಕೋರಲಾದ ರೂ. 8,03,075/–ಗಳನ್ನು ಸರ್ಕಾರವು ಅನುದಾನ ಬಿಡುಗಡೆ ಮಾಡಿ ಆದೇಶಿಸಿದೆ.

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಮಾಜಿ ಪಟೇಲರುಗಳಿಗೆ ಪಾವತಿಸಲು ರೂ. 8,24,390/– (ಎಂಟು ಲಕ್ಷದ ಇಪ್ಪತ್ತ ನಾಲ್ಕು ಸಾವಿರದ ಮುನ್ನೂರ ತೊಂಭತ್ತು) ಗಳನ್ನು ಸರ್ಕಾರವು ಅನುದಾನ ಬಿಡುಗಡೆ ಮಾಡಿ ಪಾವತಿಸಲು ಆದೇಶಿಸಲಾಗಿದೆ.

ಮೇಲ್ಕಂಡಂತೆ ಬಾಗಲಕೋಟೆ/ದಾವಣಗೆರೆ/ವಿಜಾಪುರ/ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಿಗೆ ಒಟ್ಟು ರೂ. 29,051,58/– (ಇಪ್ಪತ್ತೊಂಭತ್ತು ಲಕ್ಷದ ಒಂದು ಸಾವಿರದ ಐದುನೂರ ಐವತ್ತೆಂಟು ರೂ.) ಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2029–00–101–1–01–015 (ಪೂರಕ ವೆಚ್ಚ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : ಆಇ 1184 ವೆಚ್ಚ 7.2009 ದಿನಾಂಕ : 18–3–2010ರ ಸಹಮತಿ/ಅಭಿಪ್ರಾಯದೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಆರ್. ಲೀಲಾವತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–ಎ)

ಪಿ.ಆರ್. 883

## ಕಂದಾಯ ಸಚಿವಾಲಯ

**ವಿಷಯ** : ಉತ್ತರ ಕನ್ನಡ ಜಿಲ್ಲೆಯ ಅನುವಂಶಿಕರಲ್ಲದ ಮಾಜಿ ಪಟೇಲರುಗಳಿಗೆ ಅನುಕಂಪ ಭತ್ಯೆ ಪಾವತಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಉತ್ತರ ಕನ್ನಡ ಜಿಲ್ಲೆ, ಜಿಲ್ಲಾಧಿಕಾರಿಯವರ ಪತ್ರ ಸಂಖ್ಯೆ : ಕಂಶಾ/ಭುಸು/ವಿವ–209/08–09, ದಿನಾಂಕ : 8–4–2009, 7–12–2009, 18–12–2009, 6–1–2010 ಹಾಗೂ 13–1–2010
2. ಸರ್ಕಾರದ ಪತ್ರ ಸಂಖ್ಯೆ : ಕಂಇ 531 ಎಂವಿಎಸ್ 2006, ದಿನಾಂಕ : 9–4–2009
3. ಸರ್ಕಾರದ ಪತ್ರ ಸಂಖ್ಯೆ : ಕಂಇ 5 ಎಂವಿಎಸ್ 2010, ದಿನಾಂಕ : 12–1–2010

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 8–4–2009, ರ ಪತ್ರದಲ್ಲಿ 7–12–2009 ಹಾಗೂ 18–12–2009 ರ ಪತ್ರಗಳಲ್ಲಿ ಉತ್ತರ ಕನ್ನಡ ಜಿಲ್ಲಾಧಿಕಾರಿಗಳು ಕೋರಿರುವಂತೆ ಉತ್ತರ ಕನ್ನಡ ಜಿಲ್ಲೆಯ ಅನುವಂಶಿಕರಲ್ಲದ ಮಾಜಿ ಪಟೇಲರಾದ ಶ್ರೀ ಅಣ್ಣಯ್ಯ ಮಹಾಬಳೇಶ್ವರ್ ವೈದ್ಯ ಇವರಿಗೆ ಅನುಕಂಪ ಭತ್ಯೆ ಪಾವತಿಸಲು ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಿಂದ ರೂ. 42,000/– ಗಳನ್ನು ಡ್ರಾ ಮಾಡಲು ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಹಾಗೂ ಶ್ರೀ ತಿಮ್ಮಣ್ಣ ವಿಷ್ಣು ಹೆಗಡೆ ಮತ್ತು ಶ್ರೀ ಸುಬ್ಬಾಭಟ್ ಇವರಿಗೆ ತಲಾ ರೂ. 76,200/ ರಂತೆ ಅನುಕಂಪ ಭತ್ಯೆಯಾಗಿ ಪಾವತಿಸಲು ಒಟ್ಟು ರೂ. 1,52,400 ಗಳನ್ನು ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಿಂದ ಡ್ರಾ ಮಾಡಲು ಮೇಲೆ ಕ್ರಮ ಸಂಖ್ಯೆ : 3 ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ, ಡ್ರಾ ಮಾಡಿದ ಒಟ್ಟು ರೂ. 1,94,400/– ಗಳನ್ನು ಉತ್ತರ ಕನ್ನಡ ಜಿಲ್ಲೆಯ ಅನುವಂಶಿಕರಲ್ಲದ ಮಾಜಿ ಪಟೇಲರುಗಳಿಗೆ ಬಾಕಿ ಅನುಕಂಪ ಭತ್ಯೆ ಪಾವತಿಸಲು ಬಿಡುಗಡೆಯಾಗುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಗೆ ಮರುಹೊಂದಾಣಿಕೆ ಮಾಡಬೇಕೆಂಬ ಷರತ್ತಿನೊಂದಿಗೆ ಸರ್ಕಾರದ ಅನುಮತಿ ನೀಡಲಾಗಿತ್ತು.

ಉತ್ತರ ಕನ್ನಡ ಜಿಲ್ಲೆಯ ಅನುವಂಶಿಕರಲ್ಲದ ಮಾಜಿ ಪಟೇಲರುಗಳಿಗೆ ಬಾಕಿ ಅನುಕಂಪ ಭತ್ಯೆ ಪಾವತಿಸಲು ಬಿಡುಗಡೆಯಾಗುವ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಗೆ ಮರುಹೊಂದಾಣಿಕೆ ಮಾಡಬೇಕೆಂಬ ಷರತ್ತಿಗೊಳಪಟ್ಟು ರೂ. 1,94,400/– ಗಳನ್ನು ಜಿಲ್ಲಾಧಿಕಾರಿಗಳ ಪಿ.ಡಿ. ಖಾತೆಯಿಂದ ಸೆಳೆದು ಅನುಕಂಪ ಭತ್ಯೆ ಪಾವತಿಸಲಾಗಿದ್ದು ಅನುಕಂಪ ಭತ್ಯೆ ಪಾವತಿಸಲು ಸರ್ಕಾರದಿಂದ ಅನುದಾನ ಬಿಡುಗಡೆಯಾಗದ ಹಿನ್ನೆಲೆಯಲ್ಲಿ ಉತ್ತರ ಕನ್ನಡ ಜಿಲ್ಲೆಯ ಅನುವಂಶಿಕರಲ್ಲದ 245 ಮಾಜಿ ಪಟೇಲರುಗಳಿಗೆ ದಿನಾಂಕ 1–1–1994 ರಿಂದ 31–12–2000 ರವರೆಗೆ ಅನುಕಂಪ ಭತ್ಯೆಯ ವ್ಯತ್ಯಾಸದ ಮೊತ್ತ

ಪಾವತಿಸಲು ರೂ. 1,02,90,000/–ಗಳ ಅನುದಾನ ಕೂಡಲೇ ಬಿಡುಗಡೆ ಮಾಡುವಂತೆ ಕೋರಿ ಉತ್ತರ ಕನ್ನಡ ಜಿಲ್ಲಾಧಿಕಾರಿಗಳು ಮೇಲೆ ಕ್ರಮ ಸಂಖ್ಯೆ : 1 ರಲ್ಲಿ ಓದಲಾದ ದಿನಾಂಕ 6–1–2010 ಮತ್ತು ದಿನಾಂಕ 13–1–2010ರ ಪತ್ರಗಳಲ್ಲಿ ಸಲ್ಲಿಸಿದ್ದ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 36 ಎಂವಿಎಸ್ 2010, ಬೆಂಗಳೂರು, ದಿನಾಂಕ: 23–3–2010**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಉತ್ತರ ಕನ್ನಡ ಜಿಲ್ಲೆಯ ಅನುವಂಶಿಕರಲ್ಲದ 245 ಮಾಜಿ ಪಟೇಲರುಗಳಿಗೆ ದಿನಾಂಕ 1–1–1994 ರಿಂದ 31–12–2000 ರವರೆಗಿನ ಅವಧಿಗೆ ಅನುಕಂಪ ಭತ್ಯೆಯ ವ್ಯತ್ಯಾಸದ ಮೊತ್ತವಾಗಿ ರೂ. 1,03,32,000/– ಗಳನ್ನು ( ಒಂದು ಕೋಟಿ ಮೂರು ಲಕ್ಷ ಮೂವತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಪ್ರತಿ ಮಾಹೆಗೆ ತಲಾ ರೂ. 500/–ರಂತೆ ಪಾವತಿಸಲು ಸರ್ಕಾರದ ಮಂಜೂರಾತಿ ನೀಡಿ ಆದೇಶಿಸಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ : 2071–01–200–0–06–251 ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 1184 ವೆಚ್ಚ–7/2009, ದಿನಾಂಕ 18–3–2010 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
(ಆರ್. ಲೀಲಾವತಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–ಎ)

ಪಿ.ಆರ್. 884

**ಕಂದಾಯ ಸಚಿವಾಲಯ**

**ವಿಷಯ :** 2009–10ನೇ ಸಾಲಿಗೆ ಕುಡಿಯುವ ನೀರಿಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಗುಲ್ಬರ್ಗಾ ಜಿಲ್ಲಾಧಿಕಾರಿಗಳ ಪತ್ರ ಸಂಖ್ಯೆ : ಕಂ/ನೈವಿ/323/2009–10, ದಿನಾಂಕ : 12–1–2010

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಗುಲ್ಬರ್ಗಾ ಜಿಲ್ಲೆಯ ಜಿಲ್ಲಾಧಿಕಾರಿಗಳು ಪ್ರಕೃತಿ ವಿಕೋಪ ಪರಿಹಾರ ನಿಧಿ ಅಡಿಯಲ್ಲಿ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಗುಲ್ಬರ್ಗಾ ಜಿಲ್ಲೆಯ ಸಿಆರ್‌ಎಫ್ ಪಿಡಿ ಖಾತೆಯಲ್ಲಿ ಕಡಿಮೆ ಅನುದಾನ ಉಳಿಕೆ ಇದ್ದು, ಬೇಸಿಗೆ ಕಾಲಕ್ಕೆ ಕುಡಿಯುವ ನೀರು ಒದಗಿಸಲು ಅನುದಾನ ಬಿಡುಗಡೆ ಮಾಡುವ ಅವಶ್ಯಕತೆ ಇದ್ದು, ಅದರಂತೆ ಗುಲ್ಬರ್ಗಾ ಜಿಲ್ಲೆಗೆ ಪ್ರಕೃತಿ ವಿಕೋಪ ಪರಿಹಾರ ನಿಧಿಯಲ್ಲಿ ಅನುದಾನ ಬಿಡುಗಡೆ ಮಾಡಲು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 137 ಟಿಎನ್‌ಆರ್ 2009 (ಭಾ) ಬೆಂಗಳೂರು, ದಿನಾಂಕ: 23–3–2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಗುಲ್ಬರ್ಗಾ ಜಿಲ್ಲೆಯಲ್ಲಿ ಬೇಸಿಗೆ ಕಾಲದಲ್ಲಿ ಕುಡಿಯುವ ನೀರು ಒದಗಿಸಲು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಜಿಲ್ಲಾಧಿಕಾರಿಗಳು ಗುಲ್ಬರ್ಗಾ ಜಿಲ್ಲೆ ಇವರಿಗೆ ರೂ. 41,43,000/– ಗಳ ಅನುದಾನ (ರೂಪಾಯಿ ನಲವತ್ತೊಂದು ಲಕ್ಷ ನಲವತ್ತಮೂರು ಸಾವಿರ ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

(1) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಸಿ.ಆರ್.ಎಫ್. ಪಿಡಿ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–02–110–0–01–100 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 692 ವೆಚ್ಚ–7/2009, ದಿನಾಂಕ : 6–10–2009 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
(ಟಿ. ಗಂಗಾಧರ)
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ವಿ.ನಿ & ಸೇವೆಗಳು–2)

ಪಿ.ಆರ್. 885

**ಕಂದಾಯ ಸಚಿವಾಲಯ**

**ವಿಷಯ:** ಬೆಂಗಳೂರು ನಗರ, ಬಸವನಗುಡಿಯಲ್ಲಿರುವ ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ ಖಾಲಿ ಜಾಗವನ್ನು ಶ್ರೀಪಾಂಡುರಂಗಸ್ವಾಮಿ ದೇವಾಲಯದ ನಿರ್ಮಾಣಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆರವರ ಪತ್ರ ಸಂಖ್ಯೆ : ಎಡಿಎಂ 3 ಎಲ್ಎನ್‌ಡಿ 29/2009–10 ದಿನಾಂಕ :31.10.2009.

**ಪ್ರಸ್ತಾವನೆ:**

ಮೇಲೆ ಓದಲಾದ ಧಾರ್ಮಿಕ ದತ್ತಿ ಆಯುಕ್ತರ ಪತ್ರ ದಿನಾಂಕ: 31.10.2009 ರಲ್ಲಿ ಬೆಂಗಳೂರು ನಗರ, ಬಸವನಗುಡಿಯಲ್ಲಿರುವ ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ ಖಾಲಿ ಜಾಗವನ್ನು ಶ್ರೀ ಪಾಂಡುರಂಗಸ್ವಾಮಿ ದೇವಾಲಯ ನಿರ್ಮಾಣ ಮಾಡುವ ಬಗ್ಗೆ ವರದಿ ನೀಡಿರುತ್ತಾರೆ. ಸದರಿ ದೇವಸ್ಥಾನದ ಆವರಣದಲ್ಲಿ ಶ್ರೀ ಪಾಂಡುರಂಗಸ್ವಾಮಿ ಭಾವಸಾರ ಭಕ್ತ ಮಂಡಳಿ (ರಿ), ಬಸವನಗುಡಿ, ಬೆಂಗಳೂರು ಇವರು ತಮ್ಮ ಆರಾಧ್ಯ ದೇವರಾದ ಶ್ರೀ ಪಾಂಡುರಂಗ ಸ್ವಾಮಿಯ ವಾರ್ಷಿಕ ಆರಾಧನೆಯನ್ನು ಮುಜರಾಯಿ ಇಲಾಖೆಯ ಅನುಮತಿ ಪಡೆದು ನಡೆಸುತ್ತಿದ್ದು, ಸದರಿ ಪ್ರದೇಶದ ಖಾಲಿ ಜಾಗದಲ್ಲಿ ಶ್ರೀ ಪಾಂಡುರಂಗಸ್ವಾಮಿ ದೇವಾಲಯದ ನಿರ್ಮಾಣಕ್ಕೆ ನಿವೇಶನ ಮಂಜೂರಿಗೆ ಕೋರಿರುತ್ತಾರೆ.

ಈ ಪ್ರದೇಶದಲ್ಲಿ ಶ್ರೀ ಆಂಜನೇಯಸ್ವಾಮಿ ದೇವಾಲಯಕ್ಕೆ ಸೇರಿದ ಈ ಜಾಗದಲ್ಲಿ ಈಗಾಗಲೇ ಬಿ.ಎಂ.ಎಸ್. ಎಜುಕೇಷನ್ ಟ್ರಸ್ಟ್, ಇ.ಎಸ್.ಐ. ಕಾರ್ಪೋರೇಷನ್ ಇತ್ಯಾದಿಗಳಿಗೆ ನೀಡಲಾಗಿದ್ದು, ಪ್ರಸ್ತುತ ಈ ಪ್ರದೇಶದಲ್ಲಿ 100' ಥ 50' ಖಾಲಿ ಜಾಗದಲ್ಲಿ ಲಭ್ಯವಿರುವುದಾಗಿ ಆಯುಕ್ತರು ವರದಿ ನೀಡಿರುತ್ತಾರೆ.

ಇದೇ ಪ್ರದೇಶದಲ್ಲಿ ಈ ಕೆಳಕಂಡ ಸಂಸ್ಥೆಗಳಿಗೆ ಮಂಜೂರು ಮಾಡಿದ ವಿಸ್ತೀರ್ಣ ಮತ್ತು ಗುತ್ತಿಗೆ ಮೊಬಲಗು ವಿವರ ಈ ಕೆಳಕಂಡಂತಿದೆ :–

| ಕ್ರ. ಸಂ. | ಗುತ್ತಿಗೆ ಮಂಜೂರಾದ ಸಂಸ್ಥೆ ಹೆಸರು | ಗುತ್ತಿಗೆ ಮಂಜೂರಾದ ವಿಸ್ತೀರ್ಣ | ಸರ್ಕಾರಿ ಆದೇಶ ಸಂಖ್ಯೆ ಮತ್ತು ದಿನಾಂಕ | ಗುತ್ತಿಗೆ ಮೊಬಲಗು | ಚ.ಅಡಿ ಗುತ್ತಿಗೆ ಮೊಬಲಗು |
|---|---|---|---|---|---|
| 1 | ಬಿ.ಎಂ.ಎಸ್. ಎಜುಕೇಶನ್ ಟ್ರಸ್ಟ್ | 3939.0 ಖಾ ಥಿಚಿಡಿಜ (35,451 ಖಾಜಿ.) | ಉ.ಔ.ಓಔಖಆ 23 ಒಐಖ 1970 ಜಚಿಣಜಜು: 07.07.1973 | ಖ. 1000/– ಕಒ. | ಖ.0.34 |
| 2 | ಬಿ.ಎಂ.ಎಸ್. ಎಜುಕೇಶನ್ ಟ್ರಸ್ಟ್ | 2,635.50 ಖಾ ಥಿಚಿಡಿಜ (23,720 ಖಾಜಿ.) | ಉ.ಔ.ಓಔ ಕಂಇ 55ಮುಅಬಿ 2009 ದಿನಾಂಕ: 13.07.2009 (ಗುತ್ತಿಗೆ ಅವಧಿ 14.06.2011 ರವರೆಗೆ ವಿಸ್ತರಣೆ) | ರೂ.40,000/– | ಖ.20.24 |

ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಪರಿಗಣಿಸಿ, ಸದರಿ ದೇವಸ್ಥಾನವನ್ನು ಭಕ್ತಾದಿಗಳ ಸದುದ್ದೇಶಕ್ಕಾಗಿ ದೇವಾಲಯ ನಿರ್ಮಾಣ ಮಾಡಲು ಜಮೀನು ಮಂಜೂರಿಗೆ ಕೋರಿರುವುದರಿಂದ ಹಾಗೂ ಜಮೀನನ್ನು ಯಾವುದೇ ಆರ್ಥಿಕ ಲಾಭಕ್ಕೆ ಉಪಯೋಗಿಸಿಕೊಳ್ಳದ ಕಾರಣ ಆಯುಕ್ತರು, ಧಾರ್ಮಿಕ ದತ್ತಿ ಇಲಾಖೆ ಇವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸದರಿ ಜಮೀನನ್ನು ಗುತ್ತಿಗೆ ಆಧಾರದ ಮೇಲೆ ರಿಯಾಯ್ತಿ ದರದಲ್ಲಿ ಮಂಜೂರಿ ಮಾಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 85 ಮುಆಬಿ 2009,ಬೆಂಗಳೂರು, ದಿನಾಂಕ : 23.03.2010**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ನಗರ, ಬಸವನಗುಡಿ ಶ್ರೀ ಕಾರಂಜಿ ಆಂಜನೇಯ ಸ್ವಾಮಿ ದೇವಾಲಯಕ್ಕೆ ಸೇರಿರುವ 100' ಥ 50' ವಿಸ್ತೀರ್ಣವನ್ನು ಶ್ರೀ ಪಾಂಡುರಂಗ ಸ್ವಾಮಿ ಭಾವಸಾರ ಭಕ್ತ ಮಂಡಳಿ (ರಿ), ಬಸವನಗುಡಿ, ಬೆಂಗಳೂರು ಇವರು ನಿರ್ಮಿಸಲು ಉದ್ದೇಶಿಸಿರುವ ಶ್ರೀ ಪಾಂಡುರಂಗ ಸ್ವಾಮಿ ದೇವಾಲಯಕ್ಕೆ ಚದರ ಅಡಿ 1ಕ್ಕೆ ಮಾಸಿಕ ರೂ. 2/–ರಂತೆ 30 ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಈ ಕೆಳಕಂಡ ಷರತ್ತಿಗೆ ಒಳಪಡಿಸಿ ಮಂಜೂರು ಮಾಡಿದೆ.

**ಷರತ್ತು**

ಅ) ಸದರಿ ಜಾಗವನ್ನು ಯಾವ ಉದ್ದೇಶಕ್ಕಾಗಿ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಮಾತ್ರ ಬಳಸತಕ್ಕದ್ದು :

ಆ) ಸದರಿ ದೇವಸ್ಥಾನದ ನಿರ್ಮಾಣದಿಂದ ಹಾಗೂ ನಿತ್ಯ ಚಟುವಟಿಕೆಗಳಿಂದ ಮುಖ್ಯ ದೇವಾಲಯದ ಪೂಜಾ ಪುನಸ್ಕಾರಗಳಿಗೆ ತೊಂದರೆಯಾಗದಂತೆ ನೋಡಿಕೊಳ್ಳತಕ್ಕದ್ದು ;

ಇ) ಈ ಮಂಜೂರಾತಿಯು ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997 ಮತ್ತು ನಿಯಮ 2002ರ ಗುತ್ತಿಗೆ ನಿಬಂಧನೆಗೆ ಒಳಪಟ್ಟಿದೆ.

ಈ) ಈ ಗುತ್ತಿಗೆ ಮಂಜೂರಾತಿಯ ಷರತ್ತನ್ನು ಉಲ್ಲಂಘಿಸಿದಲ್ಲಿ, ಮಂಜೂರಿ ಜಾಗವನ್ನು ಸರ್ಕಾರವು ವಾಪಸ್ಸು ಪಡೆದು ಮುಖ್ಯ ದೇವಾಲಯವಾದ ಶ್ರೀ ಕಾರಂಜಿ ಆಂಜನೇಯಸ್ವಾಮಿ ದೇವಾಲಯಕ್ಕೆ ನೀಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 886

**(ಜಿ. ರಾಮಚಂದ್ರಯ್ಯ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಮುಜರಾಯಿ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ** : ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿನ ಪಿಪಿಪಿ ಕೋಶದಲ್ಲಿನ ಸಹಾಯಕ ನಿರ್ದೇಶಕರ ಒಂದು ಹುದ್ದೆಯನ್ನು ಗ್ರೂಫ್–ಎ ಯಿಂದ ಗ್ರೂಫ್–ಬಿ ಗೆ ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ** : (1) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 15 ಸಸಿವಿ 96, ದಿನಾಂಕ 20–3–2002.
(2) ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 496 ಸಅಸೇ 2009, ದಿನಾಂಕ:31–12–2009.
(3) ಕಡತ ಸಂಖ್ಯೆ ಸಿಆಸುಇ 301 ಸಿಶಾಸೇ 2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 20–3–2002ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಇತರ ಹುದ್ದೆಗಳೊಡನೆ ಪಿಪಿಪಿ ಕೋಶದಲ್ಲಿ ವೇತನ ಶ್ರೇಣಿ 7400–13120 ರಲ್ಲಿನ ಸಹಾಯಕ ನಿರ್ದೇಶಕರ ಎರಡು ಹುದ್ದೆಗಳನ್ನು ಗ್ರೂಫ್–ಎನಲ್ಲಿ ಸೃಜಿಸಲಾಗಿತ್ತು. ಆನಂತರ ಸದರಿ ಹುದ್ದೆಯನ್ನು ಮುಂದುವರೆಸಿ ಅಂತಿಮವಾಗಿ ಮೇಲೆ(2) ರಲ್ಲಿ ಓದಲಾದ ದಿನಾಂಕ 31–12–2009ರ ಆದೇಶದಲ್ಲಿ ದಿನಾಂಕ 21–9–2009ರಿಂದ ಒಂದು ವರ್ಷದವರೆಗೆ ಮುಂದುವರಿಸಲಾಗಿದೆ. ಸಿ.ಆ.ಸು.ಇ. (ಆಡಳಿತ) ವಿಭಾಗವು ಮೇಲೆ (3)ರಲ್ಲಿ ಓದಲಾದ ಕಡತವನ್ನು ದಿನಾಂಕ 2–3–2010ರಂದು ಕಳುಹಿಸಿ ಎರಡು ಸಹಾಯಕ ನಿರ್ದೇಶಕರ ಹುದ್ದೆಗಳ ಪೈಕಿ ಒಂದನ್ನು ಗ್ರೂಫ್–ಬಿಗೆ ನಿಮ್ನೀಕರಿಸುವಂತೆ ಕೋರಿದೆ. ಇದನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 149 ಸಅಸೇ 2010 ಬೆಂಗಳೂರು, ದಿನಾಂಕ 27ನೇ ಮಾರ್ಚ 2010.**

ಕರ್ನಾಟಕ ಸರ್ಕಾರ ಸಚಿವಾಲಯದ ಮೂಲಸೌಲಭ್ಯ ಅಭಿವೃದ್ಧಿ ಇಲಾಖೆಯಲ್ಲಿ ಇತರ ಹುದ್ದೆಗಳೊಡನೆ ಪಿಪಿಪಿ ಕೋಶದಲ್ಲಿ ವೇತನ ಶ್ರೇಣಿ 7400–13120ರಲ್ಲಿನ ಸಹಾಯಕ ನಿರ್ದೇಶಕರ ಎರಡು ಹುದ್ದೆಗಳ ಪೈಕಿ ಒಂದನ್ನು ಗ್ರೂಫ್–ಬಿ ಹುದ್ದೆ ಎಂದು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನಿಮ್ನೀಕರಿಸಲಾಗಿದೆ.

ಪಿ.ಆರ್. 887

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಂ.ಎಸ್.ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಸುತ್ತೋಲೆ**

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 18 ಸಿವಿವಿ 2010, ಬೆಂಗಳೂರು, ದಿನಾಂಕ : 29.03.2010**

ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 45 ಸಿವಿವಿ 2009 ದಿನಾಂಕ 21–5–2009 ರಲ್ಲಿನ ಅಂಶಗಳನ್ನೊಳಗೊಂಡಂತೆ ಕರ್ನಾಟಕ ರಾಜ್ಯ ಮಾಹಿತಿ ಆಯುಕ್ತರು. ಇವರ ಸಂಖ್ಯೆ: ಕಮಾಆ 7854 ಕುಬ 2009, ದಿನಾಂಕ: 19–11–2009ರ ಆದೇಶದನ್ವಯ ಸಿ.ಆ.ಸು. ಇಲಾಖೆಗೆ ಸಂಬಂಧಪಟ್ಟ ಕರ್ನಾಟಕ ಮಾಹಿತಿ ಹಕ್ಕು ಕಾಯ್ದೆಯಡಿ ಬರುವ ಎಲ್ಲಾ ಅರ್ಜಿಗಳನ್ನು ಸಿಆಸುಇ (ಸ್ವೀಮರ) ಶಾಖೆಯ ಶಾಖಾಧಿಕಾರಿಯವರು ಸಂಬಂಧಪಟ್ಟ ಸಾರ್ವಜನಿಕ ಸಮನ್ವಯ ಅಧಿಕಾರಿಗಳು. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಕಾರ್ಯದರ್ಶಿಯವರ ಆಡಳಿತ ವಿಭಾಗಕ್ಕೆ ಬರುವ ಸೇವೆಗಳು. ಸೇವಾ ನಿಯಮಗಳು. ಶಿಷ್ಟಾಚಾರ, ಕಾರ್ಯಕಾರಿ ಹಾಗೂ ಆಡಳಿತ ವಿಭಾಗಕ್ಕೆ ಸಂಬಂಧಪಟ್ಟಂತೆ ಮಾಹಿತಿ ಹಕ್ಕು ಕಾಯ್ದೆ ಅಡಿ ಅರ್ಜಿಗಳನ್ನು ಸ್ವೀಕರಿಸಿದ ನಂತರ ಪ್ರತ್ಯೇಕ ಫೋಲ್ಡರ್‌ಗಳಲ್ಲಿಟ್ಟು, ಆ ಫೋಲ್ಡರ್ ಮೇಲೆ "Applications under R II Act" ಎಂದು ನಮೂದಿಸಿ ಸಂಬಂಧಪಟ್ಟ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿರುವ ಉಪ ಕಾರ್ಯದರ್ಶಿಯವರಿಗೆ ಅಥವಾ ಅಧೀನ ಕಾರ್ಯದರ್ಶಿಯವರಿಗೆ ಕಳುಹಿಸಲು ಸೂಕ್ತ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**(ಎಸ್.ಎನ್. ಕೃಷ್ಣಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸಿಬ್ಬಂದಿ)

**ಪಿ.ಆರ್. 888**

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ಅಧಿಕೃತ ಜ್ಞಾಪನ**

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 21 ಇಆಸು 2008, ಬೆಂಗಳೂರು, ದಿನಾಂಕ : 17.03.2010**

**ವಿಷಯ:** ಬೆಳಗಾಂ ವಿಭಾಗದ ಬಿಜಾಪುರ, ಬಾಗಲಕೋಟೆ ಜಿಲ್ಲೆಗಳಲ್ಲಿ ಹಾಗೂ ಗುಲ್ಬರ್ಗಾ ವಿಭಾಗದಲ್ಲಿ ಬೇಸಿಗೆ ಕಾಲದಲ್ಲಿ ಕಛೇರಿ ಕೆಲಸದ ವೇಳೆಯನ್ನು ನಿಗದಿಪಡಿಸುವ ಬಗ್ಗೆ.

**ಉಲ್ಲೇಖ:** ದಿನಾಂಕ: 30.03.1995ರ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 84 ಇಆಸು 94.

ಉಲ್ಲೇಖ (1) ರಲ್ಲಿ ನಮೂದಿಸಿರುವ ದಿನಾಂಕ: 30.03.1995ರ ಸರ್ಕಾರಿ ಅಧಿಕೃತ ಜ್ಞಾಪನದಲ್ಲಿ ಗುಲ್ಬರ್ಗಾ ವಿಭಾಗದಲ್ಲಿರುವ ಮತ್ತು ಬೆಳಗಾಂ ವಿಭಾಗದ ಬಿಜಾಪುರ ಜಿಲ್ಲೆಯಲ್ಲಿರುವ ಕರ್ನಾಟಕ ಸರ್ಕಾರದ ಎಲ್ಲಾ ಸರ್ಕಾರಿ ಕಛೇರಿಗಳು, ಕಛೇರಿ ಕೆಲಸದ ವೇಳೆಯನ್ನು ಏಪ್ರಿಲ್ ಹಾಗೂ ಮೇ ತಿಂಗಳುಗಳಲ್ಲಿ ಬೆಳಿಗ್ಗೆ 8.00ರಿಂದ ಮಧ್ಯಾಹ್ನ 1.30 ಘಂಟೆಯವರೆಗೆ ನಿರ್ವಹಿಸತಕ್ಕದೆಂದು ನಿರ್ಧರಿಸಲಾಗಿತ್ತು.

ಗುಲ್ಬರ್ಗಾ ವಿಭಾಗದಲ್ಲಿ ಮತ್ತು ಬೆಳಗಾಂ ವಿಭಾಗದ ಬಿಜಾಪುರ ಜಿಲ್ಲೆಯಲ್ಲಿ ಬೇಸಿಗೆ ಕಾಲದಲ್ಲಿ ಬಿಸಿಲಿನ ತಾಪ ಹೆಚ್ಚಾಗಿರುತ್ತದೆಂಬ ಕಾರಣದಿಂದ ಬೆಳಗಿನ ಕಛೇರಿ ವೇಳೆಯನ್ನು ಹಿಂದೆ ನಿಗದಿಪಡಿಸಲಾಗಿತ್ತು. ಆದರೆ, ಸದರಿ ಸ್ಥಳಗಳಲ್ಲಿರುವ ಎಲ್ಲಾ ಕೇಂದ್ರ ಸರ್ಕಾರದ ಕಛೇರಿಗಳು, ಬ್ಯಾಂಕ್‌ಗಳು ಇತ್ಯಾದಿ ಕಛೇರಿಗಳು ಸಹ ಬೆಳಿಗ್ಗೆ 10.00 ಘಂಟೆಯಿಂದ ಸಂಜೆ 5.30ರವರೆಗೆ ಬೇಸಿಗೆ ಕಾಲದಲ್ಲೂ ಕೆಲಸ ನಿರ್ವಹಿಸುತ್ತಿವೆ. ಆದರೆ, ಸರ್ಕಾರಿ ಕಛೇರಿಗಳ ಕೆಲಸದ ಅವಧಿಯನ್ನು ಬೆಳಿಗ್ಗೆ 8.00ರಿಂದ ಮಧ್ಯಾಹ್ನ 1.30 ಘಂಟೆಯವರೆಗೆ ನಿಗದಿಪಡಿಸಿರುವುದರಿಂದ ಸರ್ಕಾರಿ ನೌಕರರಿಗೆ ಬೆಳಿಗ್ಗೆ 8.00 ಘಂಟೆಗೆ ಕಛೇರಿಗೆ ಬರುವುದಕ್ಕೆ ಅನಾನುಕೂಲವಾಗುತ್ತದೆಯೆಂದೂ ಮತ್ತು ಮಧ್ಯಾಹ್ನ 1.30ಕ್ಕೆ ಕಛೇರಿಯನ್ನು ಬಿಟ್ಟು ಹೋಗುವಾಗ ಬಿಸಿಲಿನ ತಾಪ ಹೆಚ್ಚಾಗಿರುತ್ತದೆಂದೂ ಪರಿಗಣಿಸಿ ಬೆಳಿಗ್ಗೆ 10.00 ರಿಂದ 5.30 ಘಂಟೆಯವರೆಗೆ ಕೆಲಸದ ವೇಳೆಯನ್ನು ನಿಗದಿಪಡಿಸಿದರೆ, ಸರ್ಕಾರಿ ನೌಕರರಿಗೆ ಅನುಕೂಲವಾಗುತ್ತದೆಂದು ಹಾಗೂ ಕಛೇರಿ ಕೆಲಸದ ವೇಳೆಯಲ್ಲಿ ತಾರತಮ್ಯ ಇಲ್ಲದೆ ಸಮಾನವಾದ ಕಛೇರಿ ಕೆಲಸದ ವೇಳೆಯನ್ನು ನಿಗದಿಪಡಿಸಿದಲ್ಲಿ, ಸಾರ್ವಜನಿಕರಿಗೆ ಅನುಕೂಲವಾಗುತ್ತದೆ ಎಂಬುದನ್ನು ಗಮನದಲ್ಲಿಟ್ಟುಕೊಂಡು, ಉಲ್ಲೇಖ (1)ರಲ್ಲಿ ನಮೂದಿಸಿರುವ ದಿನಾಂಕ: 30.03.1995ರ ಅಧಿಕೃತ ಜ್ಞಾಪನವನ್ನು ಈ ಮೂಲಕ ವಾಪಸ್ಸು ಪಡೆಯಲಾಗಿದೆ. ಆದುದರಿಂದ ಗುಲ್ಬರ್ಗಾ ವಿಭಾಗದ ಎಲ್ಲಾ ಜಿಲ್ಲೆಗಳಲ್ಲಿ ಮತ್ತು ಬೆಳಗಾಂ ವಿಭಾಗದ ಬಿಜಾಪುರ ಬಾಗಲಕೋಟೆ ಜಿಲ್ಲೆಗಳಲ್ಲಿರುವ ಎಲ್ಲಾ ಸರ್ಕಾರಿ ಕಛೇರಿಗಳ ಕೆಲಸದ ವೇಳೆಯನ್ನು ಏಪ್ರಿಲ್ ಹಾಗೂ ಮೇ ತಿಂಗಳುಗಳಲ್ಲಿ, 2010–11ನೇ ಸಾಲಿನಿಂದ ಅನ್ವಯವಾಗುವಂತೆ ಎಂದಿನಂತೆ ಬೆಳಿಗ್ಗೆ 10.00ರಿಂದ ಸಂಜೆ 5.30 ಘಂಟೆಯವರೆಗೆ ಎಂದು ನಿಗದಿಪಡಿಸಲಾಗಿದೆ.

**(ಅಬ್ದುಲ್ ರೆಹಮಾನ್)**
ಸರ್ಕಾರದ ಅಧೀನ ಕಾರ್ಯದರ್ಶಿ,
**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ** (ಆಸು–ತರಬೇತಿ)

**ಪಿ.ಆರ್. 889**

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ** : ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಂಸ್ಥಾಪಕರಾದ ಪೂಜ್ಯ ಡಿ.ವಿ. ಗುಂಡಪ್ಪನವರ 125 ನೇ ಜನ್ಮದಿನೋತ್ಸವ ಸ್ಮರಣೆಯಲ್ಲಿ ಸಂಸ್ಥೆಯ ಆವರಣದಲ್ಲಿ ನಿರ್ಮಾಣವಾಗುತ್ತಿರುವ ಡಿ.ವಿ.ಜಿ. ಸ್ಮಾರಕ ಭವನ ನಿರ್ಮಾಣವನ್ನು ಪೂರೈಸಲು ಅನುದಾನವನ್ನು ನೀಡುವ ಬಗ್ಗೆ.

**ಓದಲಾಗಿದೆ** : (1) ಕಾರ್ಯದರ್ಶಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ, ಇವರ ಪತ್ರ ಸಂಖ್ಯೆ 5800/08-09,ದಿನಾಂಕ 16.01.2010

(2) ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 11 ಸ್ಮಾಪ್ರನಿ 2010, ದಿನಾಂಕ 04.02.2010

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ 16.01.2010ರ ಪತ್ರದಲ್ಲಿ ಕಾರ್ಯದರ್ಶಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಇವರು ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯು ಅನೇಕ ಸಾರ್ವಜನಿಕ ಚಟುವಟಿಕೆಗಳನ್ನು ನಡೆಸಿಕೊಂಡು ಬಂದಿದ್ದು, ಅನೇಕ ಪ್ರಮುಖ ಕಾರ್ಯಕ್ರಮಗಳನ್ನು ಕೈಗೊಂಡಿದೆ. ಆದ್ದರಿಂದ ಈ ಸಂಸ್ಥೆಯ ಸಂಸ್ಥಾಪಕರಾದ ಪೂಜ್ಯ ಡಿ.ವಿ. ಗುಂಡಪ್ಪನವರ 125 ನೇ ಜನ್ಮದಿನೋತ್ಸವ ಅಂಗವಾಗಿ ಸಂಸ್ಥೆಯ ಆವರಣದಲ್ಲಿ ನಿರ್ಮಾಣ ಹಂತದಲ್ಲಿರುವ ಡಿ.ವಿ.ಜಿ ಸ್ಮಾರಕ ಭವನ ನಿರ್ಮಾಣವನ್ನು ಪೂರೈಸಲು ರೂ.1.50 ಕೋಟಿಗಳನ್ನು 2010-11 ನೇ ಸಾಲಿನ ಆಯವ್ಯಯದಲ್ಲಿ ಅನುಮೋದನೆ ನೀಡಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಹಾಗೂ ಇವರ ಪ್ರಸ್ತಾವನೆಯ ಪತ್ರದ ಮೇಲೆ ಮಾನ್ಯ ಮುಖ್ಯಮಂತ್ರಿಗಳು "2009-10ನೇ ಆಯವ್ಯಯದಲ್ಲಿ 2 ಕಂತುಗಳಲ್ಲಿ ಕೂಡಲೇ 1.50 ಕೋಟಿ ಬಿಡುಗಡೆ ಮಾಡಲು ಆದೇಶಿಸಿರುತ್ತಾರೆ"

ಮೇಲೆ (2) ರಲ್ಲಿ ಓದಲಾದ ದಿನಾಂಕ 4.02.2010ರ ಸರ್ಕಾರಿ ಆದೇಶದಲ್ಲಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸಂಸ್ಥಾಪಕರಾದ ಪೂಜ್ಯ ಡಿ.ವಿ. ಗುಂಡಪ್ಪನವರ ಹೆಸರಿನಲ್ಲಿ ಸಂಸ್ಥೆಯ ಆವರಣದಲ್ಲಿ ಸ್ಮಾರಕ ಭವನ ನಿರ್ಮಾಣ ಮಾಡಲು ಮೊದಲನೇ ಕಂತಾಗಿ ರೂ.75.00 ಲಕ್ಷಗಳನ್ನು ಷರತ್ತಿಗೊಳಪಟ್ಟು ಕಾರ್ಯದರ್ಶಿ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿತ್ತು.

ಮಾನ್ಯ ಮುಖ್ಯ ಮಂತ್ರಿಗಳ ಆದೇಶದಂತೆ 2009-10ನೇ ಸಾಲಿನ ಆಯವ್ಯಯದಲ್ಲಿ 2ನೇ ಕಂತಿನ ಹಣವಾದ ರೂ.75.00 ಲಕ್ಷಗಳನ್ನು ಸದರಿ ಸಂಸ್ಥೆಗೆ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಅನುಮತಿ ನೀಡಿರುವುದರಿಂದ ರೂ.75.00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 11 ಸ್ಮಾಪ್ರನಿ 2010, ಬೆಂಗಳೂರು, ದಿನಾಂಕ: 26.03.2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ ಸ್ಥಾಪಕರಾದ ಪೂಜ್ಯ ಡಿ.ವಿ. ಗುಂಡಪ್ಪನವರ ಹೆಸರಿನಲ್ಲಿ ಸಂಸ್ಥೆಯ ಆವರಣದಲ್ಲಿ ಸ್ಮಾರಕ ಭವನ ನಿರ್ಮಾಣ ಮಾಡಲು ಎರಡನೇ ಕಂತಾಗಿ ರೂ.75.00 ಲಕ್ಷ (ರೂಪಾಯಿ ಎಪ್ಪತ್ತೈದು ಲಕ್ಷಗಳು ಮಾತ್ರ) ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ಕಾರ್ಯದರ್ಶಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿದೆ.

1) ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ರಂತೆ ಕ್ರಮ ಕೈಗೊಳ್ಳತಕ್ಕದ್ದು.
2) ರೂ.150.00 ಲಕ್ಷಗಳಿಗೆ ಅಂದಾಜು ವೆಚ್ಚ ಪಟ್ಟಿ ಹಾಗೂ ನೀಲಿ ನಕ್ಷೆ ತಯಾರಿಸಿ ತಾಂತ್ರಿಕ ಅನುಮತಿ ಪಡೆಯತಕ್ಕದ್ದು.
3) ಈ ಹಣವನ್ನು ಯಾವ ಉದ್ದೇಶಕ್ಕೆ ನೀಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸಿಕೊಂಡು ಹಣಬಳಕೆಯ ಬಗ್ಗೆ ಪ್ರಮಾಣಪತ್ರ ಸಲ್ಲಿಸುವುದು.

ಈ ಮೊತ್ತವನ್ನು 2009-10ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2205-00-102-4-31-059 (ಕನ್ನಡ ಮತ್ತು ಸಂಸ್ಕೃತಿಗೆ ಉತ್ತಾಹ) (ಯೋಜನೆ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ದಿನಾಂಕ 24.03.2010ರ ಟಿಪ್ಪಣಿ ಸಂಖ್ಯೆ: ಆಇ 267 ವೆಚ್ಚ-7 2010ರಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ನು ಹಾಗೂ ದಿನಾಂಕ 25.03.2010 ರ ಟಿಪ್ಪಣಿ ಸಂಖ್ಯೆ: ಯೋಇ/12/ಜಶ/2010 ರಲ್ಲಿ ಯೋಜನಾ ಇಲಾಖೆಯ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 890

**(ಎಂ.ಕೆ. ಧರ್ಮರಾಜಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ**

(ಆಡಳಿತ ಕನ್ನಡ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ** : ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2009–10ನೇ ಸಾಲಿಗೆ ಎರಡನೇ ಕಂತಿನ ಅನುದಾನವನ್ನು ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1) ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 4 ಡಬ್ಲ್ಯೂಜಿಪಿ 09 ದಿನಾಂಕ 13–04–2009.

2) ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ. ಪಿ.ಸಿ(ಪಿ) 19/125/ಕೆಎಆರ್/ 2009ನೇ ಡಬ್ಲ್ಯೂಜಿಎಸ್ ದಿನಾಂಕ 6–11–2009.

3) ಯೋಜನಾ ಆಯೋಗ (ಪಶ್ಚಿಮ ಘಟ್ಟಗಳ ಸಚಿವಾಲಯ), ಭಾರತ ಸರ್ಕಾರ, ನವದೆಹಲಿ ಇವರ ಪತ್ರ ಸಂ. ಪಿ.ಸಿ(ಪಿ) 19/320/ಎಸ್‌ಸಿಎ/2009ನೇ ಡಬ್ಲ್ಯೂಜಿಎಸ್ ದಿನಾಂಕ: 10–03–2010.

4) ಆರ್ಥಿಕ ಇಲಾಖೆಯ ಜಮಾ ಧೃಢಿಕರಣ ಪತ್ರ CCS No. FD 13 BGL 2009 ದಿನಾಂಕ 19–03–2010

**ಪ್ರಸ್ತಾವನೆ :**

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅನುಷ್ಠಾನವನ್ನು ಮೇಲೆ ಓದಲಾದ ಪತ್ರ (1) ರಂತೆ 2009–10ನೇ ಸಾಲಿನಲ್ಲಿ ಮುಂದುವರೆಸಲಾಗಿದೆ. ಭಾರತ ಸರ್ಕಾರದ ಯೋಜನಾ ಆಯೋಗದ ಪಶ್ಚಿಮ ಘಟ್ಟಗಳ ಸಚಿವಾಲಯವು ಮೇಲೆ ಓದಲಾದ ಪತ್ರ (2) ರಲ್ಲಿ ಈ ಕಾರ್ಯಕ್ರಮದ ಅನುಷ್ಠಾನ ಕಾರ್ಯವನ್ನು 2009–10 ನೇ ಸಾಲಿನಲ್ಲಿ ಮುಂದುವರೆಸುವ ಸಲುವಾಗಿ ರಾಜ್ಯಕ್ಕೆ ಹಂಚಿಕೆ ಮಾಡಿರುವ ವಿಶೇಷ ಕೇಂದ್ರ ಅನುದಾನ ರೂ. 2924.00 ಲಕ್ಷಗಳ ವಾರ್ಷಿಕ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿರುತ್ತದೆ. ಇದರಲ್ಲಿ ಶೇ. 90 ಭಾಗ ಅಂದರೆ ರೂ. 2631.60 ಲಕ್ಷ ಕೇಂದ್ರ ಸರ್ಕಾರ ಬಿಡುಗಡೆ ಮಾಡಲಿರುವ ನಿಧಿ ರೂಪದ್ದಾಗಿದ್ದು, ಉಳಿಕೆ ಶೇ. 10 ಭಾಗ ಅಂದರೆ ರೂ. 292.40 ಲಕ್ಷ ರಾಜ್ಯದ ಪಾಲಾಗಿರುತ್ತದೆ. ಆ ಸಚಿವಾಲಯವು ಮೇಲೆ ಓದಲಾದ ಪತ್ರ (3) ರಲ್ಲಿ ಪ್ರಸಕ್ತ ಸಾಲಿನ ಒಟ್ಟಾರೆ ಅನುದಾನ ರೂ. 2924.00 ಲಕ್ಷ ಪೈಕಿ ಶೇ90 ರಷ್ಟು ಅಂದರೆ ರೂ. 2631.60 ಲಕ್ಷ ಅಗಲಿದ್ದು , ಅದರಲ್ಲಿ 2 ನೇ ಮತ್ತು ಅಂತಿಮ ಕಂತಿನ ಬಾಬ್ತು ಶೇ. 25 ಅಂದರೆ ರೂ. 657.90 ಲಕ್ಷಗಳನ್ನು ರಾಜ್ಯಕ್ಕೆ ಬಿಡುಗಡೆ ಮಾಡಿದೆ. ಈ ಅನುದಾನವು ರಾಜ್ಯ ಸರ್ಕಾರದ ಖಾತೆಗೆ ಜಮಾ ಆಗಿರುವ ಬಗ್ಗೆ ಆರ್ಥಿಕ ಇಲಾಖೆಯು ಮೇಲೆ ಓದಲಾದ ಪತ್ರ (4) ರಂತೆ ಜಮಾ ಧೃಢಿಕರಣ ಪತ್ರವನ್ನು ನೀಡಿರುತ್ತದೆ. ಈ ಅನುದಾನದ ಜೊತೆಗೆ ರಾಜ್ಯದ ಪಾಲಿನ ಶೇ. 10 ಅನುದಾನವಾದ ರೂ. 73.10 ಲಕ್ಷ ಮತ್ತು ಈಗಾಗಲೇ ಬಿಡುಗಡೆ ಮಾಡಿರುವ ಮೊದಲನೆ (1ನೇ) ಕಂತಿನಲ್ಲಿ ರಾಜ್ಯದ ಪಾಲಿನ ಉಳಿಕೆ ಅನುದಾನ ರೂ. 40.57 ಲಕ್ಷಗಳನ್ನೂ ಸೇರಿಸಿ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದರೆ 2009–10 ನೇ ಸಾಲಿನ ಆಯವ್ಯಯದಲ್ಲಿ ಈ ಕಾರ್ಯಕ್ರಮಕ್ಕಾಗಿ ಹಂಚಿಕೆಯಾದ ರೂ. 2632.00 ಲಕ್ಷಗಳಲ್ಲಿ ಈಗಾಗಲೇ ಒಂದನೆ ಕಂತಿನ ಅನುದಾನ ರೂ. 1945.88 ಲಕ್ಷಗಳನ್ನು ಬಿಡುಗಡೆ ಮಾಡಿರುವುದರಿಂದ ಪ್ರಸ್ತುತ ಆಯವ್ಯಯ ಹಂಚಿಕೆಯಲ್ಲಿ ಲಭ್ಯವಿರುವ ರೂ. 686.12 ಲಕ್ಷಗಳನ್ನು ರಾಜ್ಯದ ಸಂಬಂಧಪಟ್ಟ ಜಿಲ್ಲಾ ಪಂಚಾಯತ್‌ಗಳಿಗೆ ಪ್ರಸಕ್ತ ಸಾಲಿನ 2ನೇ ಕಂತಿನ ಭಾಗಶ: ಅನುದಾನವನ್ನು ಬಿಡುಗಡೆ ಮಾಡಲು ಸರ್ಕಾರವು ತೀರ್ಮಾನಿಸಿರುತ್ತದೆ.

ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ. ಗ್ರಾಅಪ 1 ಪಘಯೋ 2009(ಭಾ–1) , ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2010**

ಕೇಂದ್ರ ಪುರಸ್ಕೃತ ಕಾರ್ಯಕ್ರಮವಾದ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು 2009–10ನೇ ಸಾಲಿನಲ್ಲಿ ಅನುಮೋದಿತ ಕ್ರಿಯಾ ಯೋಜನೆಯ ಅನ್ವಯ ಅನುಷ್ಠಾನಗೊಳಿಸುವ ಸಲುವಾಗಿ ಕೇಂದ್ರ ಸರ್ಕಾರವು ಬಿಡುಗಡೆ ಮಾಡಿರುವ ಎರಡನೇ ಕಂತಿನ ವಿಶೇಷ ಕೇಂದ್ರ ಅನುದಾನ ರೂ. 657.90 ಲಕ್ಷ ಮತ್ತು ರಾಜ್ಯದ ಪಾಲಿನ ಶೇ. 10 ಅನುದಾನವಾದ ರೂ. 73.10 ಲಕ್ಷಗಳ ಪೈಕಿ ರೂ. 34.97 ಲಕ್ಷಗಳನ್ನು ಸೇರಿಸಿ ಒಟ್ಟಾರೆ ರೂ. 693.62 ಲಕ್ಷಗಳಲ್ಲಿ ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಯೋಜನಾ ಕೋಶಕ್ಕೆ ರೂ. 7.50 ಲಕ್ಷ ಅನುದಾನ ಹೊಂದಾಣಿಕೆ ಮಾಡಿಕೊಂಡು ಬಾಕಿ ಉಳಿದ ಅನುದಾನ ರೂ. 686.12 ಲಕ್ಷಗಳನ್ನು (ರೂ. ಆರು ಕೋಟಿ ಎಂಬತ್ತಾರು ಲಕ್ಷ ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ರಾಜ್ಯದ 11

ಜಿಲ್ಲಾ ಪಂಚಾಯತಿಗಳಿಗೆ ಅನುಬಂಧ–1 ರಲ್ಲಿ ತೋರಿಸಿರುವಂತೆ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. 2009–10 ನೇ ಸಾಲಿನಲ್ಲಿ ನಿಮ್ಮ ಜಿಲ್ಲೆಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ನಮೂದಿಸಿರುವ ಕಾರ್ಯಕ್ರಮಗಳನ್ನು ಮಾತ್ರ ನಿಮ್ಮ ಜಿಲ್ಲೆಗೆ ನಿಗದಿಪಡಿಸಿರುವ ಅನುದಾನಕ್ಕೊಳಪಟ್ಟು ಅನುಷ್ಠಾನಗೊಳಿಸುವುದು.
2. ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮವನ್ನು ಕೇಂದ್ರ ಸರ್ಕಾರವು ಕಾಲಕಾಲಕ್ಕೆ ಹೊರಡಿಸುತ್ತಿರುವ ಮಾರ್ಗಸೂಚಿಗಳನ್ವಯ ಅನುಷ್ಠಾನಗೊಳಿಸುವುದು.
3. ಒಂದು ವಲಯಕ್ಕೆ ನಿಗದಿಪಡಿಸಿರುವ ಅನುದಾನವನ್ನು ಇನ್ನೊಂದು ವಲಯಕ್ಕೆ ಯಾವುದೇ ಕಾರಣಕ್ಕೂ ವರ್ಗಾಯಿಸಬಾರದು.
4. ಹಾಲಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಅನುಮೋದಿತ ಕ್ರಿಯಾ ಯೋಜನೆಯಲ್ಲಿನ ಮುಂದುವರೆದ ಅಪೂರ್ಣ ಕಾಮಗಾರಿಗಳಿಗೆ ಪ್ರಥಮ ಆದ್ಯತೆ ನೀಡಿ ಪೂರ್ಣಗೊಳಿಸತಕ್ಕದ್ದು. ಅನಂತರ ತೋಟಗಾರಿಕೆ ಹಾಗೂ ಅರಣ್ಯೀಕರಣ ಕಾಮಗಾರಿಗಳಿಗೆ ಆದ್ಯತೆ ನೀಡಿ ಅನುಮೋದನೆಯಾಗಿರುವ ಹೊಸ ಕಾಮಗಾರಿಗಳನ್ನು ಕೈಗೆತ್ತಿಕೊಂಡು ಅನುಷ್ಠಾನಗೊಳಿಸುವುದು.
5. ಸಾಂಬಾರು ಮಂಡಳಿಯ ಕಾರ್ಯಕ್ರಮಗಳಿಗೆ ಪ್ರಸ್ತುತ ಕಂತಿನಲ್ಲಿ ಒದಗಿಸಿರುವ ಅನುದಾನ ರೂ. 4.95 ಲಕ್ಷಗಳನ್ನು ಆ ಮಂಡಳಿಗೆ ಸಂಬಂಧಪಟ್ಟ ಜಿಲ್ಲಾ ಪಂಚಾಯತಿಯು ಬಿಡುಗಡೆ ಮಾಡುವುದು.
6. ಕೇಂದ್ರ ಸರ್ಕಾರವು ನಿಗದಿಪಡಿಸಿರುವ ನಮೂನೆಯಲ್ಲೇ ಪ್ರತಿ ತ್ರೈಮಾಸಿಕ ವರದಿಯನ್ನು ಸಕಾಲದಲ್ಲಿ ತಪ್ಪದೇ ಸರ್ಕಾರಕ್ಕೆ ಸಲ್ಲಿಸುವುದು. (Statement-I Financial, Statement-II- Physical, verification report for beneficiary oriented schemes, verification report for schemes relating to construction works)
7. ಜಿಲ್ಲಾ ಪಂಚಾಯತಿಯ ಮೂಖ್ಯ ಲೆಕ್ಕಾಧಿಕಾರಿಗಳು ಸಹಾಯಾನುದಾನ ಬಿಲ್ಲಿನ ಮೇಲೆ ನಿಯಮಗಳ ಪ್ರಕಾರ ಅನುದಾನವನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಖಜಾನೆಯಿಂದ ಪಡೆದು, ಅನುಷ್ಠಾನಾಧಿಕಾರಿಗಳಿಗೆ ಬಿಡುಗಡೆ ಮಾಡುವುದು.

2551–ಗುಡ್ಡಗಾಡು ಪ್ರದೇಶಗಳು–01 ಪಶ್ಚಿಮ ಘಟ್ಟಗಳು –001 ನಿರ್ದೇಶನ ಮತ್ತು ಆಡಳಿತ –0–01–ಯೋಜನಾಕೋಶ –059–ಇತರೆ ಖರ್ಚು (ಯೋಜನೆ) (2551–01–001–0–01–059)

ಈ ಆದೇಶವನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಪ್ಪಣಿ ಸಂ. ಗ್ರಾಅಪ 77 ಪಿಬಿಎಸ್ 2010 ದಿನಾಂಕ 23–03–2010 ರಲ್ಲಿ ಸಹಮತಿಸಿದಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಡಾ: ಪಿ.ಸಿ. ಜಾಫರ್)**

ನಿರ್ದೇಶಕರು

ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ

ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

ಅನುಬಂಧ–1

ಸರ್ಕಾರದ ಆದೇಶದ ಸಂ. ಗ್ರಾಅಪ 1 ಪಘಯೋ 2009 (ಭಾ–1), ಬೆಂಗಳೂರು ದಿನಾಂಕ 23–03–2010

ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮದ ಅಡಿ 2009–10 ನೇ ಸಾಲಿನ ಜಿಲ್ಲಾವಾರು ಎರಡನೇ ಕಂತಿನ ಅನುದಾನ ಬಿಡುಗಡೆ ತ:ಖ್ತೆ (ರೂ. ಲಕ್ಷಗಳಲ್ಲಿ)

| ಕ್ರ. ಸಂ | ಜಿಲ್ಲೆಯ ಹೆಸರು | 2009–10ನೇ ಸಾಲಿನ ಜಿಲ್ಲಾವಾರು ಅನುದಾನ ಹಂಚಿಕೆ | ವಿಶೇಷ ಕೇಂದ್ರ ಅನುದಾನ | ರಾಜ್ಯ ಪಾಲಿನ ಭಾಗಶ: ಅನುದಾನ | ಜಿಲ್ಲೆಗಳಿಗೆ ಬಿಡುಗಡೆ ಮಡಲಾಗುತ್ತಿರುವ ಎರಡನೇ ಕಂತಿನ ಒಟ್ಟು ಅನುದಾನ (ಕೇಂದ್ರ+ ರಾಜ್ಯ) | ಕಾಲಂ 6ರ ಪೈಕಿ ಸಾಂಬಾರು ಮಂಡಳಿಗೆ ಬಿಡುಗಡೆ ಆಗಿರುವ ಅನುದಾನ | ಬಿಡುಗಡೆಗೆ 1ನೇ ಕಂತಿನ ರಾಜ್ಯ ಪಾಲಿನ ಬಾಕಿ ಅನುದಾನ | ಬಾಕಿ ಇರುವ 2ನೇ ಕಂತಿನ ರಾಜ್ಯ ಪಾಲಿನ ಬಾಕಿ ಅನು ದಾನ | ಅನುದಾನ ಒಟ್ಟು |
|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 |
| 1 | ಬೆಳಗಾಂ | 467.75 | 105.24 | 5.65 | 110.89 | - | 6.50 | 6.04 | 12.54 |
| 2 | ಚಾಮರಾಜನಗರ | 86.20 | 19.40 | 1.04 | 20.44 | - | 1.19 | 1.12 | 2.31 |
| 3 | ಚಿಕ್ಕಮಗಳೂರು | 276.35 | 62.18 | 3.34 | 65.52 | 1.03 | 3.84 | 3.57 | 7.41 |
| 4 | ದಕ್ಷಿಣ ಕನ್ನಡ | 206.30 | 46.42 | 2.49 | 48.91 | - | 2.86 | 2.67 | 5.53 |
| 5 | ಧಾರವಾಡ | 67.20 | 15.12 | 0.81 | 15.93 | - | 0.93 | 0.87 | 1.80 |
| 6 | ಹಾಸನ | 221.65 | 49.87 | 2.68 | 52.55 | 0.93 | 3.07 | 2.86 | 5.93 |
| 7 | ಕೊಡಗು | 247.90 | 55.78 | 3.00 | 58.78 | 0.75 | 3.44 | 3.20 | 6.64 |
| 8 | ಮೈಸೂರು | 96.95 | 21.81 | 1.17 | 22.98 | - | 1.34 | 1.25 | 2.59 |
| 9 | ಶಿವಮೊಗ್ಗ | 410.45 | 92.35 | 4.96 | 97.31 | 1.27 | 5.70 | 5.30 | 11.00 |
| 10 | ಉಡುಪಿ | 296.85 | 66.79 | 3.59 | 70.38 | - | 4.12 | 3.83 | 7.95 |
| 11 | ಉತ್ತರ ಕನ್ನಡ | 516.40 | 116.19 | 6.24 | 122.43 | 0.97 | 7.17 | 6.67 | 13.84 |
| | ಒಟ್ಟು | 2894.00 | 651.15 | 34.97 | 686.12 | 4.95 | 40.16 | 37.38 | 77.54 |
| 12 | ಪಶ್ಚಿಮ ಘಟ್ಟಗಳ ಅಭಿವೃದ್ಧಿ ಕಾರ್ಯಕ್ರಮ ಯೋಜಾನಾಕೋಶ | 30.00 | 6.75 | 0.75 | 7.50 | 0.00 | 0.41 | 0.00 | 0.41 |
| | ಜುಮ್ಲಾ | 2924.00 | 657.90 | 35.72 | 693.62 | 4.95 | 40.57 | 37.38 | 77.95 |

**(ಡಾ: ಪಿ.ಸಿ. ಜಾಫರ್)**

ನಿರ್ದೇಶಕರು

ಯೋಜನೆ, ಸಮನ್ವಯ ಹಾಗೂ ಮೇಲ್ವಿಚಾರಣಾ ಘಟಕ

ಹಾಗೂ ಪದ ನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ

ಪಿ.ಆರ್. 891 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**ತೋಟಗಾರಿಕೆ ಸಚಿವಾಲಯ**

**ವಿಷಯ** : ತೋಟಗಾರಿಕೆ ಇಲಾಖೆಯ ಅಧಿಕಾರಿಗಳಿಗೆ ಆಡಳಿತಾತ್ಮಕ ಅಧಿಕಾರ ವಿಕೇಂದ್ರೀಕರಣಗೊಳಿಸುವ ಬಗ್ಗೆ.

**ಓದಲಾಗಿದೆ** : ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ಲೆಶಾ/ವಿನಿ4/58/98–99, ದಿನಾಂಕ: 18–7–2009 ಮತ್ತು ದಿನಾಂಕ 29–10–2009

**ಪ್ರಸ್ತಾವನೆ :**

ಮೇಲೆ ಓದಲಾದ ತೋಟಗಾರಿಕೆ ನಿರ್ದೇಶಕರ ಪತ್ರದಲ್ಲಿ ತೋಟಗಾರಿಕೆ ಇಲಾಖೆಯ ವಿಭಾಗೀಯ ತೋಟಗಾರಿಕೆ ಜಂಟಿ ನಿರ್ದೇಶಕರ ಹುದ್ದೆಗಳನ್ನು ಸರ್ಕಾರವು ರದ್ದು ಮಾಡಿರುವ ಹಿನ್ನೆಲೆಯಲ್ಲಿ ವಿಭಾಗೀಯ ತೋಟಗಾರಿಕೆ ಜಂಟಿ ನಿರ್ದೇಶಕರುಗಳು ನಿರ್ವಹಿಸುತ್ತಿದ್ದ ಶಾಸನ ಬದ್ದ ಅಧಿಕಾರಗಳನ್ನು ತೋಟಗಾರಿಕೆ ಉಪನಿರ್ದೇಶಕರ ಹುದ್ದೆಯ ವ್ಯಾಪ್ತಿಗೆ ಒಳಪಡಿಸಿರುವುದರಿಂದ ದಿನನಿತ್ಯದ ಕೆಲಸ ಕಾರ್ಯಗಳು ತ್ವರಿತವಾಗಿ ನಿಗದಿತ ಸಮಯದಲ್ಲಿ ಅನುಷ್ಠಾನಗೊಳಿಸಬೇಕಾಗುತ್ತದೆ. ತೋಟಗಾರಿಕೆ ಉಪನಿರ್ದೇಶಕರವರ ಅಧಿಕಾರ ವ್ಯಾಪ್ತಿಗೆ ಮೀರಿರುವ ಆಡಳಿತಾತ್ಮಕ ಪ್ರಸ್ತಾವನೆಗಳನ್ನು ನಿರ್ದೇಶನಾಲಯಕ್ಕೆ ಸಲ್ಲಿಸಬೇಕಾದ ಪರಿಸ್ಥಿತಿ ಉಂಟಾಗಿದ್ದು, ಯೋಜನೆಗಳ ಕಾರ್ಯಕ್ರಮಗಳನ್ನು ನಿಗದಿತ ಅವಧಿಯಲ್ಲಿ ಅನುಷ್ಠಾನಗೊಳಿಸುವುದು ಕಷ್ಟಸಾಧ್ಯವಾಗಿದೆ ಎಂದು ಇಲಾಖೆಯ ಅಧಿಕಾರಿಗಳು ಆಗಿಂದಾಗ್ಗೆ ನಡೆಸುವ ಸಭೆಗಳಲ್ಲಿ ಮನವಿ ಮಾಡುತ್ತಿದ್ದ ಹಿನ್ನೆಲೆಯಲ್ಲಿ ಹಾಗೂ ಇತ್ತೀಚಿನ ದಿನಗಳಲ್ಲಿ ಸಾಮಾಗ್ರಿಗಳ ಬೆಲೆಗಳು ಹೆಚ್ಚಾಗಿರುವುದರಿಂದ ಆಡಳಿತಾತ್ಮಕ ಅಧಿಕಾರಗಳನ್ನು ಹೆಚ್ಚಿಸಿ ಆದೇಶ ಹೊರಡಿಸುವಂತೆ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ತೋಟಗಾರಿಕೆ ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಈಗಾಗಲೇ ನಿರ್ದೇಶಕರಿಗೆ ಇರುವ ಕೆಲವು ಅಧಿಕಾರಗಳನ್ನು ಜಂಟಿ ನಿರ್ದೇಶಕರು ಹಾಗೂ ಉಪನಿರ್ದೇಶಕರುಗಳಿಗೆ ಪ್ರತ್ಯಾಯೋಜಿಸುವ ಪ್ರಸ್ತಾವನೆ ಬಗ್ಗೆ ನಿರ್ದೇಶಕರು ಹಾಗೂ ಜಂಟಿ ನಿರ್ದೇಶಕರುಗಳ ಸಭೆ ಕರೆದು ಚರ್ಚಿಸಲಾಗಿದೆ. ವಿಳಂಬವನ್ನು ತಪ್ಪಿಸುವ ಹಾಗೂ ಆಡಳಿತವನ್ನು ಸರಳೀಕರಿಸುವ ಉದ್ದೇಶದಿಂದ ಈ ವಿಕೇಂದ್ರೀಕರಣ ಅಗತ್ಯವಾಗಿದೆ ಎಂದು ಸರ್ಕಾರವು ತೀರ್ಮಾನಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 260 ತೋಸೇಪ 2009, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ತಿಳಿಸಿರುವ ವಿವರಣೆಯನ್ನು ಸರ್ಕಾರವು ಪರಿಶೀಲಿಸಿ, ನಿರ್ದೇಶಕರಿಗೆ ಇರುವ ಕೆಲವು ಅಧಿಕಾರಿಗಳನ್ನು ಜಂಟಿ ನಿರ್ದೇಶಕರು ಹಾಗೂ ಉಪನಿರ್ದೇಶಕರುಗಳಿಗೆ ಪ್ರತ್ಯಾಯೋಜಿಸುವ ಬಗ್ಗೆ ಮತ್ತು ವಿಳಂಬವನ್ನು ತಪ್ಪಿಸುವ ಹಾಗೂ ಆಡಳಿತವನ್ನು ಸರಳೀಕರಿಸುವ ಉದ್ದೇಶದಿಂದ ಆಡಳಿತಾತ್ಮಕ ಅಧಿಕಾರ ವಿಕೇಂದ್ರೀಕರಣ ಅಗತ್ಯವಾಗಿದ್ದು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧ –1 ರಲ್ಲಿರುವಂತೆ ನಿಗದಿಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್ ರಾಜು)**

ಸರ್ಕಾರ ಅಧೀನ ಕಾರ್ಯದರ್ಶಿ

ತೋಟಗಾರಿಕೆ ಇಲಾಖೆ

ಪಿ.ಆರ್. 892

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ** : ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ–ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಸಂಸ್ಥೆಯಿಂದ ಪಡೆದಿದ್ದ ಸಾಲದ ಮೇಲಿನ ಬಡ್ಡಿ ಹಣ ಸರ್ಕಾರದಿಂದ ಪಾವತಿ ಮಾಡಲು ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : ರೀಜನಲ್ ಚೀಫ್,ಹುಡ್ಕೋರವರ ಪತ್ರ ಸಂಖ್ಯೆ: HUDCO/BRO/KAR/MSCL/16757& 16989/2010 ದಿನಾಂಕ 25–02–2010 ಮತ್ತು 12–03–2010.

2) ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರು ಸರ್ಕಾಕ್ಕೆ ಸಲ್ಲಿಸಿರುವ ಮನವಿ ದಿನಾಂಕ 17–03–2010.

**ಪ್ರಸ್ತಾವನೆ :**

ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ ಈ ಕಾರ್ಖಾನೆಯಲ್ಲಿ ಸಹ ವಿದ್ಯುತ್ ಘಟಕ ಸ್ಥಾಪನೆಗಾಗಿ ಹುಡ್ಕೋ ಹಣಕಾಸು ಸಂಸ್ಥೆಯಿಂದ 5726.16 ಲಕ್ಷ ರೂ. ಗಳ ಸಾಲ ಪಡೆಯಲು ದಿನಾಂಕ 30–07–2001 ರಂದು ಕಾರ್ಖಾನೆಯು ಹುಡ್ಕೋದೊಂದಿಗೆ ಒಪ್ಪಂದ ಮಾಡಿಕೊಂಡಿದ್ದು, ರಾಜ್ಯ ಸರ್ಕಾರವು ಸದರಿ ಸಾಲಕ್ಕೆ ಗ್ಯಾರಂಟಿ ನೀಡಿದ್ದು, ಕಾರ್ಖಾನೆಯು ಈ

ದಿನಾಂಕದವರೆವಿಗೂ ಹುಡ್ಕೋ ಸಂಸ್ಥೆಗೆ ಸಾಲದ ಹಣದ ಮರುಪಾವತಿ ಮಾಡದ ಕಾರಣ ಸದರಿ ಸಾಲದ ಮರುಪಾವತಿಗಾಗಿ ಹುಡ್ಕೋ ಸಂಸ್ಥೆಯು ಮೇಲೆ ಓದಲಾದ (1)ರಲ್ಲಿರುವ ಪತ್ರಗಳಲ್ಲಿ ಕೆಲವು ಷರತ್ತುಗಳೊಂದಿಗೆ OTS offer ಮಾಡಿದೆ.

ಹುಡ್ಕೋ ಸಂಸ್ಥೆಯು Offer ಮಾಡಿರುವಂತೆ ದಿನಾಂಕ 26–03–2010 ರವರೆಗೆ ವಿಧಿಸಿರುವ 3703.64 ಲಕ್ಷ ರೂ. ಗಳ ಕ್ರೂಢೀಕೃತ ಬಡ್ಡಿಯನ್ನು ಪಾವತಿ ಮಾಡಲು ಹಾಗೂ ಶೇ. 61.98 ರಷ್ಟು OTS ಬಾಕಿ ಮೊತ್ತ ರೂ. 5723.76 ಲಕ್ಷ ರೂ. ಗಳನ್ನು 7 ವರ್ಷಗಳಲ್ಲಿ ಶೇ. 10.90 ಬಡ್ಡಿಯೊಂದಿಗೆ ಕಾರ್ಖಾನೆಯು ಮರುಪಾವತಿ ಮಾಡುವಂತೆ ಹುಡ್ಕೋ ಸಂಸ್ಥೆಯು OTS offer ನಲ್ಲಿ ಸೂಚಿಸಿದ್ದು ಇದಕ್ಕೆ ಕಾರ್ಖಾನೆಯ ವ್ಯವಸ್ಥಾಪಕ ನಿರ್ದೇಶಕರು ಮೇಲೆ ಓದಲಾದ (2)ರಲ್ಲಿರುವ ಮನವಿಯಲ್ಲಿ ಹುಡ್ಕೋ ಸಂಸ್ಥೆಯು ಮಾಡಿರುವ OTS offer ಅನ್ನು ಮತ್ತೆ 6.00 ಕೋಟಿ ರೂ. ಗಳಿಗೆ ಹೆಚ್ಚಿಸುವಂತೆ ಕೋರಿರುತ್ತಾರೆ.

ಈ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಹುಡ್ಕೋ ಸಂಸ್ಥೆಯು ಮಾಡಿರುವ OTS offer ನಂತೆ ಕಾರ್ಖಾನೆಯು ಹುಡ್ಕೋ ಸಂಸ್ಥೆಗೆ ಪಾವತಿಸಬೇಕಾದ 3703.64 ಲಕ್ಷ ರೂ. ಗಳ ಬಡ್ಡಿಯನ್ನು ಸರ್ಕಾರದಿಂದ ಪಾವತಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 184 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ: '26ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಯು ಸಹವಿದ್ಯುತ್ ಘಟಕ ಸ್ಥಾಪನೆಗಾಗಿ ಮತ್ತು ಶುಗರ್ಸ್ ಗೋಡೌನ್ ಕಟ್ಟಲು ಹುಡ್ಕೋ ಹಣಕಾಸು ಸಂಸ್ಥೆಯಿಂದ ಪಡೆಯಲಾಗಿದ್ದ 5726.16 ಲಕ್ಷ ರೂ. ಗಳ ಸಾಲದ ಮರುಪಾವತಿ ಸಂಬಂಧ ಹುಡ್ಕೋ ಸಂಸ್ಥೆಯು ಮಾಡಿರುವ OTS offer ನಂತೆ ಕಾರ್ಖಾನೆಯು ಪಾವತಿಸಬೇಕಾದ ಸದರಿ ಸಾಲದ ಮೇಲಿನ ಕ್ರೋಢೀಕೃತ ಬಡ್ಡಿ ಹಣ 3703.64 ಲಕ್ಷ ರೂ. ಗಳನ್ನು ಹುಡ್ಕೋ ಸಂಸ್ಥೆಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲಾಗಿದೆ.

OTS offer ನಲ್ಲಿ ವಿಧಿಸಿರುವ ಷರತ್ತು ಮತ್ತು ನಿಬಂಧನೆಗಳಂತೆ ಬಾಕಿ ಹಣವನ್ನು ಮುಂದಿನ 7 ವರ್ಷಗಳಲ್ಲಿ ಕಾರ್ಖಾನೆಯು ಬಡ್ಡಿಯೊಂದಿಗೆ ಹುಡ್ಕೋ ಸಂಸ್ಥೆಗೆ ಮರುಪಾವತಿಸಲು ಕ್ರಮ ತೆಗೆದುಕೊಳ್ಳುವುದು. ಈ ಬಗ್ಗೆ ಪ್ರತ್ಯೇಕ ಸೂಚನೆಗಳನ್ನು ಸರ್ಕಾರದಿಂದ ನೀಡಲಾಗುವುದು.

2009–10ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಕಾರ್ಖಾನೆಯ ಪುನಃಶ್ಚೇತನ ಸಂಬಂಧ ಲೆಕ್ಕ ಶೀರ್ಷಿಕೆ "4852–02–190–0–04 (ಯೋಜನೆ)" ಅಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಈ ಹಣವನ್ನು ಬಿಡುಗಡೆಗೆ ಮಂಜೂರಾತಿ ನೀಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 585 ವೆಚ್ಚ –1/2010 ದಿನಾಂಕ 26–03–2010ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಪಿ. ಆನಂದಕುಮಾರ್)**

ಪೀಠಾಧಿಕಾರಿ (ಸಕ್ಕರೆ)

ಪಿ.ಆರ್. 893 ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## INFRASTRUCTURE DEVELOPMENT SECRETARIAT

**Sub :-** Release of funds for the Development of new airport at Bellary.

**Read :-** 1. GO No. : IDD 120 DIA 2008, dated : 6-10-2008

2. GO No. : IDD 120 DIA 2008, dated : 25-10-2008
3. GO No. : IDD 120 DIA 2008, dated : 29-08-2008
4. Letter No. KIADB/ಭೂಸ್ವಾ/ವಿಜಿ/ಕೇಕ/2003/09–10 dated 25-03-2010
5. GO No. : IDD FD 483 BRS 2009, dated : 30-03-2010

**Preamble:**

In G.O. dated 6-10-2008 read at Sl.No. (1) above sanction was accorded for establishment of a new airport at Bellary through Public Private Partnership (PPP) on BoT basis on certain terms and conditions.

2. Airport Authority of India (AAI) was requested to conduct site visit and to assess feasibility for development of new airport at Bellary. AAI has conducted the feasibility study for this airport. In G.O. dated 25-10-2008 read at Sl. No. (2) above an amount of Rs. 3.42.151/- was released to AAI being the consultancy fees for feasibility study.

3. In G.O. dated 29-08-2009 read at Sl. No. (3) above, an amount of Rs. 12.00 crores has been released to the CEO, KIADB for the payment of 40% of the cost of acquiring 900 acres (700+200) of land for the development of the new Bellary airport.

4. In the letter dated 25-03-2010 read at Sl. No. (4) above the CEO & EM, KIADB has sent a proposal for release of Rs. 89.81 crores for payment of compensation to the land owners for the land notified for Bellary airport.

5. In G.O. read at Sl. No.5 above, Finance Department has accorded sanction for the re-appropriation of a sum of Rs. 5163.20 lakhs under the major Head of Account 5465 capital outlay on general financial and trading Institutions during 2009-10 for the development of Hubli airport and Bellary airports from the following Head of Accounts:-

a. 5465-01-190-2-01 (P)- 211 Investment in BIAL through KSIIDC

b. 5465-01-190-2-05 (P)- 211 Alternate Roads Investment

c. 5465-01-190-3-04 (P)- 211 –K-RIDE-RoB/RuB project Investment

d. 5465-01-190-3-03 (P)- 211 – Sholapur-Gadag GC Project Investment

5. The Proposal of KIADB for release of funds has been examined and hence the following Order.

**Government Order No. IDD 120 DIA 2008, Bangalore, dated : 30-03-2010**

The Government after careful examination of the proposal accords sanction for release of an amount of Rs. 3500.00 lakhs (Rupees Three Thousand Five Hundred lakhs) only to the CEO, KIADB, Bangalore towards the payment of compensation for the land acquired for the Bellary airport.

2. The expenditure of Rs. 1400.00 lakhs shall be met through re-apporpriation from the Head of Account "5465-01-190-2-01-211 Investment in BIAL through KSIIDC" and Rs. 500.00 lakhs from the Head of Account "5465-01-190-2-05-211 Alternate Roads Investment" and the remaining amount of Rs. 1600.00 lakhs from the Head of A/c ""5465-01-190-3-04-211-K-RIDE- RoB/RuB project investment" to the Head of account "5465-01-190-1-05 (P) -133 Development of Minor Airport Investments" during the year 2009-10

3. The Chief Executive Officer, & Executive Member, KIADB Bangalore is authorized to draw the above amount of Rs. 3500.00 lakhs on payees receipt counter signed by the Under Secretary to government Infrastructure Development Department, Bangalore.

4. This Order is issued in accordance with Finance Department G.O. No. FD 483 BRS 2009 dated 30-03-2010 and FD vide Endorsement No. FD 626 Exp-I/2010 & FD 627 Exp.I /2010 dated 30-03-2010.

By Order and in the name of the Governor of Karnataka

(**N. Manjula Geetha)**

Under Secretary to Government

Infrastructure Development Department

P.R. 894

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ** : ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ** : 1. ಸರ್ಕಾರದ ಆದೇಶ ಸಂಖ್ಯೆ. 32 ರಾಅವಿ 2004 ದಿನಾಂಕ 20–03–2007.

**2**. ಸರ್ಕಾರದ ಆದೇಶ ಸಂಖ್ಯೆ. 32 ರಾಅವಿ 2004 ದಿನಾಂಕ 07–05–2007.

**3**. ಸರ್ಕಾರದ ಪತ್ರ ಸಂಖ್ಯೆ. ಮೂಅಇ 23 ರಾಅವಿ 2008 ದಿನಾಂಕ 20–12–2008.

**4**. ಸರ್ಕಾರದ ಆದೇಶ ಸಂಖ್ಯೆ. 23 ರಾಅವಿ 2008 ದಿನಾಂಕ 23–05–2009.

**5**. ಸರ್ಕಾರದ ಆದೇಶ ಸಂಖ್ಯೆ. 23 ರಾಅವಿ 2008 ದಿನಾಂಕ 27–11–2009.

**6**. ಜಿಲ್ಲಾಧಿಕಾರಿ, ಧಾರವಾಡ ಜಿಲ್ಲೆ ಇವರ ದಿನಾಂಕ 10–03–2010 ರ ಪತ್ರ ಸಂಖ್ಯೆ. DC/PA/CR-52/2009-10.

**7**. ಸರ್ಕಾರದ ಆದೇಶ ಸಂಖ್ಯೆ. 23 ರಾಅವಿ 2008 ದಿನಾಂಕ 26–03–2010.

**8**. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಆಇ 483 ಬಿಆರ್‌ಎಸ್ 2009 ದಿನಾಂಕ 30–03–2010.

**ಪ್ರಸ್ತಾವನೆ :**

ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರ (AAI) ತಯಾರಿಸಿ ಅನುಷ್ಠಾನಗೊಳಿಸಲು ನಿರ್ಧರಿಸಿರುವ ದೀರ್ಘಾವಧಿ ಕ್ರಿಯಾ ಯೋಜನೆ ಪ್ರಕಾರ 650 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಂಡು ಹುಬ್ಬಳ್ಳಿ ವಿಮಾನ ನಿಲ್ದಾಣವನ್ನು ಅಭಿವೃದ್ಧಿಪಡಿಸಲು ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದೆ.

2. ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿ ಹಾಗೂ ಸದರಿ ವಿಮಾನ ನಿಲ್ದಾಣದ ವಿಸ್ತರಣೆಗೆ ಅಗತ್ಯವಾದ ಭೂಸ್ವಾಧೀನಕ್ಕಾಗಿ ರೂ. 20.00 ಕೋಟಿಗಳನ್ನು ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಆದೇಶದಲ್ಲಿ ಬಿಡುಗಡೆ ಮಾಡಲಾಗಿದೆ.

3. ಮೂಖ್ಯಮಂತ್ರಿಗಳ ಪ್ರಧಾನ ಕಾರ್ಯದರ್ಶಿ ಹಾಗೂ ಮುಖ್ಯ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಏರ್ಪಟ್ಟ ಸಭೆಯ ನಿರ್ಧಾರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣಕ್ಕೆ ಅಗತ್ಯವಾದ ಭೂಸ್ವಾಧೀನ ವೆಚ್ಚದ ಅರ್ಧ ಪಾಲನ್ನು ಕೆಐಎಡಿಬಿ ಯಿಂದ ಭರಿಸುವಂತೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ಸೂಚಿಸಿ, ಭೂ ನಿವಾಸಿಗಳ ಮಾಲೀಕರಿಗೆ ಪರಿಹಾರ ಪಾವತಿಗಾಗಿ ರೂ. 3.31 ಕೋಟಿಗಳನ್ನು ಧಾರವಾಡ ಜಿಲ್ಲಾಧಿಕಾರಿಯವರಿಗೆ ಬಿಡುಗಡೆ ಮಾಡುವಂತೆ ಹಾಗೂ ಇದಕ್ಕೆ ಬದಲಾಗಿ ಕೆಐಎಡಿಬಿ 60 ಎಕರೆ ಭೂಪ್ರದೇಶವನ್ನು ಅವರ ವಾಣಿಜ್ಯಾತ್ಮಕ ಅಭಿವೃದ್ಧಿಗಾಗಿ ನೀಡುವುದಾಗಿ ತಿಳಿಸಲಾಗಿದ್ದಿತು.

4. ಮೇಲೆ ಕ್ರ. ಸಂಖ್ಯೆ. (4) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 23–05–2009 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ವಿಸ್ತರಣೆಯ ವ್ಯಾಪ್ತಿಯಲ್ಲಿ ಬರುವ ಕೈಗಾರಿಕಾ ಪ್ರದೇಶದ ಭೂಮಿಯನ್ನು ಸ್ವಾಧೀನಪಡಿಸಿಕೊಂಡು ಭೂ ಮಾಲೀಕರಿಗೆ ಪರಿಹಾರ ಧನವನ್ನು ಪಾವತಿಸಲು ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

5. ಮೇಲೆ ಕ್ರ. ಸಂಖ್ಯೆ. (5) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 27–11–2009 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಅವಶ್ಯವಿರುವ ರೂ. 25.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

6. ಜಿಲ್ಲಾಧಿಕಾರಿಗಳು, ಧಾರವಾಡ ಇವರು ಕ್ರಮ ಸಂಖ್ಯೆ (6) ರಲ್ಲಿ ಓದಲಾದ ಪತ್ರ ದಿನಾಂಕ 10–03–2010 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ಈಗಾಗಲೇ ಬಿಡುಗಡೆ ಮಾಡಿರುವ ಒಟ್ಟು ಮೊತ್ತ ರೂ. 45.00 ಕೋಟಿಗಳು ಸಂಪೂರ್ಣವಾಗಿ ಬಳಕೆಯಾಗಿರುವುದರಿಂದ ಅವಶ್ಯವಿರುವ ರೂ. 50.00 ಕೋಟಿಗಳನ್ನು ಹೆಚ್ಚುವರಿಯಾಗಿ ಕೊಡಲೇ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

7. ಮೇಲೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ಸರ್ಕಾರಿ ಆದೇಶ ದಿನಾಂಕ 26–03–2010 ರಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 20.00 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ.

8. ಧಾರವಾಡ ಜಿಲ್ಲಾಧಿಕಾರಿಗಳ ಪತ್ರದಂತೆ, ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪಾವತಿಸಬೇಕಾದ ಪರಿಹಾರದ ಬಾಕಿ ಮೊತ್ತ ರೂ. 30.00 ಕೋಟಿಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಕಳುಹಿಸಲಾಗಿದ್ದಿತು.

9. ಮೇಲೆ ಕ್ರ. ಸಂಖ್ಯೆ (8)ರಲ್ಲಿ ಓದಲಾದ ಆರ್ಥಿಕ ಇಲಾಖೆಯ ಆದೇಶ ದಿನಾಂಕ 30–03–2010 ರಲ್ಲಿ ಹುಬ್ಬಳ್ಳಿ ಹಾಗೂ ಬಳ್ಳಾರಿ ವಿಮಾನ ನಿಲ್ದಾಣಗಳ ಅಭಿವೃದ್ಧಿಗೆ ಅಗತ್ಯವಾದ ರೂ. 5163.00 ಲಕ್ಷಗಳನ್ನು ಈ ಕೆಳ ಕಾಣಿಸಿದ ಲೆಕ್ಕ ಶೀರ್ಷಿಕೆಗಳಿಂದ ಮರು ಹೊಂದಾಣಿಕೆ ಮೂಲಕ ಭರಿಸಲು ಅನುಮತಿಯನ್ನು ನೀಡಲಾಗಿರುತ್ತದೆ.

a. 5465-01-190-2-01 (P)- 211 Investment in BIAL through KSIIDC

b. 5465-01-190-2-05 (P)- 211 Alternate Roads Investment

c. 5465-01-190-3-04 (P)- 211 –K-RIDE-RoB/RuB project Investment

d. 5465-01-190-3-03 (P)- 211 – Sholapur-Gadag GC Project Investment

8. ಧಾರವಾಡ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮೂಅಇ 23 ರಾಅವಿ 2008, ಬೆಂಗಳೂರು, ದಿನಾಂಕ: 30ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಹುಬ್ಬಳ್ಳಿ ವಿಮಾನ ನಿಲ್ದಾಣದ ಅಭಿವೃದ್ಧಿಗಾಗಿ ಭೂ ಸ್ವಾಧೀನಪಡಿಸಿಕೊಂಡಿರುವ ಜಮೀನಿನ ಮಾಲೀಕರಿಗೆ ಪರಿಹಾರ ಪಾವತಿಸುವ ಸಲುವಾಗಿ ರೂ. 3000.00 ಲಕ್ಷಗಳನ್ನು (ರೂ. ಮೂರು ಸಾವಿರ ಲಕ್ಷಗಳು) ಮಾತ್ರ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2) ಈ ಮೊತ್ತವನ್ನು 2009–10 ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 5465–01–190–1–05 (P)–133 ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ ಇದರಡಿ ಲಭ್ಯವಿರುವ ಮೊತ್ತ ರೂ. 1336.80 ಲಕ್ಷಗಳೊಂದಿಗೆ ಈ ಕೆಳ ಕಾಣಿಸಿದ ಲೆಕ್ಕ ಶೀರ್ಷಿಕೆಗಳಿಂದ ಮರು ಹೊಂದಾಣಿಕೆ ಮೂಲಕ ಬಿಡುಗಡೆ ಮಾಡಲಾಗಿದೆ.

| ಕ್ರ ಸಂಖ್ಯೆ | ಲೆಕ್ಕ ಶೀರ್ಷಿಕೆ | ಮೊತ್ತ (ಲಕ್ಷ ರೂ. ಗಳಲ್ಲಿ) |
|---|---|---|
| 1 | 5465–01–190–3–03–(P)-211 – ಸೊಲ್ಲಾಪುರ– ಗದಗ ಗೇಜು ಪರಿವರ್ತನೆ ಯೋಜನೆ | 1564.20 |
| 2 | 5465–01–190–3–04– (P) –211 – ಕೆ–ರೈಡ್ RoB/RuB ಯೋಜನೆ | 99.00 * |

* ಲೆಕ್ಕ ಶೀರ್ಷಿಕೆ 5465–01–190–3–04–(P)-211 – ಕೆ–ರೈಡ್ RoB/RuB ಯೋಜನೆ ಇದರಡಿ ಲಭ್ಯವಿದ್ದ ರೂ. 1699.00 ಲಕ್ಷಗಳ ಪೈಕಿ 1600.00 ಲಕ್ಷಗಳ ಬಳ್ಳಾರಿ ವಿಮಾನ ನಿಲ್ದಾಣಕ್ಕಾಗಿ ಬಿಡುಗಡೆ ಮಾಡಿ ಬಾಕಿ ಉಳಿದ ರೂ. 99.00 ಲಕ್ಷಗಳು ಮಾತ್ರ.

3) ಈ ಮೊತ್ತವನ್ನು ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ. ಧಾರವಾಡ ಇವರು ಪೇಯೀಸ್ ರಸೀತಿ ಮೂಲಕ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ರಾಜ್ಯ ಹುಜೂರು ಖಜಾನೆ, ಬೆಂಗಳೂರು ಇಲ್ಲಿ ತೆಗೆಯುವುದು.

4) ಈ ಆದೇಶವನ್ನು ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ ಆಇ483 ಬಿಆರ್ಎಸ್ 2009 ದಿನಾಂಕ 30–03–2010 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 626 ವೆಚ್ಚ –I/ 2010 ಮತ್ತು ಆಇ 627 ವೆಚ್ಚ– I /2010 ದಿನಾಂಕ 30-03-2010 ರ ಅನುಸಾರ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎನ್. ಮಂಜುಳ ಗೀತ)**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 895 ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ಲೇಖನ ಸಾಮಗ್ರಿಗಳ ಸರಬರಾಜು ಮಾಡಿರುವ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 9 ಡಿಎಸ್‌ವೈ 2009 ದಿ : 26–02–2010

**2.** ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ಶಾಖೆಗಳ ಮನವಿ.

**3.** ದಿ : 1–3–2010ರ ಸರ್ಕಾರದ ಪತ್ರ : ಕಸಂವಾಪ್ರ 63 ಸ್ಟೀಮರ 2009.

**4.** ದಿ : 5–3–2010ರ ಅಲೈಡ್ ಸಿಂಡಿಕೇಟ್ಸ್‌ರವರ ಪತ್ರ ಸಂಖ್ಯೆ : ಇಲ್ಲ

**ಪ್ರಸ್ತಾವನೆ :**

ಮೇಲೆ ಓದಲಾದ (2)ರ ಮನವಿಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯ ವಿವಿಧ ಶಾಖೆಗಳು ಲೇಖನ ಸಾಮಗ್ರಿಗಳಿಗಾಗಿ ಮನವಿ ಸಲ್ಲಿಸಿದ್ದವು.

ಮೇಲೆ ಓದಲಾದ (3)ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಗೆ ಬೇಕಾಗಿರುವ ಲೇಖನ ಸಾಮಗ್ರಿಗಳನ್ನು ಖರೀದಿಸಲು 03 ಕಂಪನಿಗಳಿಂದ ದರಪಟ್ಟಿ ನೀಡುವಂತೆ ಕೋರಲಾಗಿತ್ತು. ಹಾಗೂ ಅದರಂತೆ 03 ಕಂಪನಿಗಳಿಂದ ಸ್ವೀಕೃತವಾದ ದರಪಟ್ಟಿಯನ್ವಯ ಇಲಾಖೆಗೆ ಅಗತ್ಯವಾಗಿ ಬೇಕಾಗುವ ಸಾಮಗ್ರಿಗಳ ಒಟ್ಟು ದರಪಟ್ಟಿಯು ಈ ಕೆಳಗಿನಂತಿರುತ್ತದೆ. ಹಾಗೂ 3 ಕಂಪನಿಗಳ ಲೇಖನ ಸಾಮಗ್ರಿಗಳ ದರಪಟ್ಟಿಯ ತುಲನಾತ್ಮಕ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

| ಕ್ರ.ಸಂ. | ಕಂಪನಿಯ ಹೆಸರು | ವಿವರ | ಪ್ರಮಾಣ ಬೆಲೆ ರೂ.ಗಳಲ್ಲಿ | ಒಟ್ಟು ರೂ.ಗಳಲ್ಲಿ |
|---|---|---|---|---|
| 1 | ಅಲೈಡ್ ಸಿಂಡಿಕೇಟ್ಸ್ | ಲೇಖನ ಸಾಮಗ್ರಿಗಳು | ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಲಾಗಿದೆ | 44632–00 |
| 2 | ಸ್ನೇಹ ಎಂಟರ್‌ಪ್ರೈಸಸ್ | ಲೇಖನ ಸಾಮಗ್ರಿಗಳು | | 45236–00 |
| 3 | ಜೀಕೆ ಎಂಟರ್‌ಪ್ರೈಸಸ್ | ಲೇಖನ ಸಾಮಗ್ರಿಗಳು | | 45556–00 |

ಈ ಮೇಲ್ಕಂಡ 03 ಕಂಪನಿಗಳಿಂದ ಪಡೆದ ದರಗಳನ್ನು ಅವಲೋಕಿಸಿ ಅತಿ ಕಡಿಮೆ ದರ ನೀಡಿರುವ ಬೆಂಗಳೂರಿನ ಅಲೈಡ್ ಸಿಂಡಿಕೇಟ್ಸ್, ನಂ.11, 10ನೇ ಅಡ್ಡ ರಸ್ತೆ, ಬನ್ನಪ್ಪ ಪಾರ್ಕ್ ಎದುರು, ಕಬ್ಬನ್ ಪೇಟೆ ಬೆಂಗಳೂರು–560 002 ರವರಿಗೆ ರೂ. 44632–00 ಗಳ (ನಲವತ್ತನಾಲ್ಕು ಸಾವಿರದ ಆರುನೂರ ಮೂವತ್ತೆರಡು ರೂ.ಗಳು ಮಾತ್ರ) ವೆಚ್ಚದಲ್ಲಿ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಈ ಕೆಳಕಂಡಂತೆ ಆದೇಶಿಸಿದೆ. ದರಪಟ್ಟಿಯು ವ್ಯಾಟ್ ತೆರಿಗೆ ಹಾಗೂ ಸಾಗಾಣೆ ವೆಚ್ಚಗಳನ್ನು ಒಳಗೊಂಡಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಕಸಂವಾಪ್ರ 63 ಸ್ವೀಮರ 2009, ಬೆಂಗಳೂರು, ದಿನಾಂಕ : 15ನೇ ಮಾರ್ಚ್ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಹಾಗೂ ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು 03 ಕಂಪನಿಗಳಿಂದ ದರಪಟ್ಟಿಗಳನ್ನು ಕರೆದಿದ್ದು ಅನುಬಂಧದಲ್ಲಿರುವ ಲೇಖನ ಸಾಮಗ್ರಿಗಳಿಗೆ ಅತಿ ಕಡಿಮೆ ದರ ರೂ. 44.632–00 ಗಳ (ನಲವತ್ತನಾಲ್ಕು ಸಾವಿರದ ಆರುನೂರ ಮೂವತ್ತೆರಡು ರೂ.ಗಳು ಮಾತ್ರ) ಗಳನ್ನು ಸೂಚಿಸಿರುವ ಬೆಂಗಳೂರಿನ ಅಲೈಡ್ ಸಿಂಡಿಕೇಟ್ಸ್, ನಂ. 11, 10ನೇ ಅಡ್ಡರಸ್ತೆ, ಬನ್ನಪ್ಪ ಪಾರ್ಕ್ ಎದುರು, ಕಬ್ಬನ್ ಪೇಟೆ, ಇವರಿಗೆ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡಲು ಆದೇಶ ನೀಡಿದೆ.

ಈ ವೆಚ್ಚವನ್ನು ದಿನಾಂಕ : 26–02–2010ರ ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 9 ಡಿಎಸ್‌ವೈ 2009ರಲ್ಲಿ ನೀಡಿರುವ ಆದೇಶದನ್ವಯ ಭರಿಸಲು ಅಲೈಡ್ ಸಿಂಡಿಕೇಟ್ಸ್‌ರವರಿಗೆ ರೂ. 44632–00ಗಳ (ನಲವತ್ತೆರಡು ಸಾವಿರದ ಆರುನೂರ ಮೂವತ್ತೆರಡು ರೂ.ಗಳು ಮಾತ್ರ) ಗಳ ಮೊತ್ತವನ್ನು ಸಿಆಸುಇ ಲೆಕ್ಕಪತ್ರ ಶಾಖೆಯು ಡಿ.ಸಿ.ಬಿಲ್ ಮೂಲಕ ಬಿಡುಗಡೆ ಮಾಡುವುದು.

ಅಲೈಡ್ ಸಿಂಡಿಕೇಟ್ಸ್ ಕಂಪನಿಯು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯಲ್ಲಿರುವ ಶಾಖೆಗಳಿಗೆ ಕೂಡಲೇ ಲೇಖನ ಸಾಮಗ್ರಿಗಳನ್ನು ಸರಬರಾಜು ಮಾಡುವುದು ಹಾಗೂ ಸಿಆಸು ಇಲಾಖೆಯಿಂದ ನೀಡುವ ಮೊತ್ತಕ್ಕೆ ಸ್ವೀಕೃತಿ ನೀಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ
ಹಾಗೂ ಪ್ರವಾಸೋದ್ಯಮ ಇಲಾಖೆ

**ANNEXURE**

**Comparitive Statement**

| Sl. No. | Description | Qty | Allied Syndicates | Sneha Enterprises | Geekay Enterprises |
|---|---|---|---|---|---|
| 01 | Samsung Toner 108 | 4 Nos. | 13200-00 | 13220-00 | 13260-00 |
| 02 | M1 1640 Laser Toner | 2 Nos. | 6600-00 | 6620-00 | 06620-00 |
| 03 | HP Laser Jet 1010 | 1 No | 3200-00 | 3210-00 | 03215-00 |
| 04 | HP Laser jet 1015 | 1 No | 3200-00 | 3208-00 | 03210-00 |
| 05 | Xerox Paper | 10 Reem | 1510-00 | 1550-00 | 01570-00 |
| 06 | L Shape Plastic Folder | 36 Nos. | 396-00 | 504-00 | 00540-00 |
| 07 | Fax Role | 100 Nos. | 7200-00 | 7500-00 | 7600-00 |
| 08 | Toner Xerox Machine | 01 No. | 5200-00 | 5210-00 | 05215-00 |
| 09 | Lever file | 06 Nos. | 390-00 | 420-00 | 00444-00 |
| 10 | HP Cartridges 21,22 | 01 No. | 1600-00 | 1605-00 | 01605-00 |
| 11 | Stapler pin (small) | 15 Box | 420-00 | 450-00 | 00525-00 |
| | | Total | 42916-00 | 43497-00 | 43804-00 |
| | | Vat 4% | 1716-00 | 1739-00 | 1752-00 |
| | | Grand Total | 44632-00 | 45236-00 | 45556-00 |

Allied Syndicates – 44632-00
Sneha Enterprises – 45236-00
Geekay Enterprises – 45556-00

**M.K. BHARMARAJAPPA**
Under Secretary to Government,
Kannada & Culture, Information
and Tourism Department.

ಪಿ.ಆರ್. 906

**ಶಿಕ್ಷಣ ಸಚಿವಾಲಯ**

ಸಂಖ್ಯೆ : 378 ಎಂಸಿಡಿ 2009 (ಭಾಗ) ಬೆಂಗಳೂರು, ದಿನಾಂಕ : 05–04–2010

**ತಿದ್ದುಪಡಿ ಆದೇಶ**

**ವಿಷಯ :** ಕೇಂದ್ರ ಪುರಸ್ಕೃತ ಯೋಜನೆಯಾದ ಸಾಕ್ಷರ ಭಾರತ್ ಕಾರ್ಯಕ್ರಮವನ್ನು ರಾಜ್ಯದಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಲುವಾಗಿ ವಿವಿಧ ಹಂತಗಳಲ್ಲಿ ಸಮಿತಿಗಳನ್ನು ರಚಿಸಿ ಅವುಗಳಿಗೆ ನಿರ್ದಿಷ್ಟ ಜವಾಬ್ದಾರಿಗಳನ್ನು ವಹಿಸಿಕೊಡುವ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂಖ್ಯೆ : ಇಡಿ 378 ಎಂಸಿಡಿ 2009 ಭಾಗ–1 ದಿನಾಂಕ : 12–03–2009

ಮೇಲ್ಕಂಡ ವಿಷಯಕ್ಕೆ ಸಂಬಂದಿಸಿದಂತೆ, ಉಲ್ಲೇಖಿತ ಸರ್ಕಾರಿ ಆದೇಶದ ಅನುಬಂಧ 3, ಮತ್ತು 4 ರಲ್ಲಿ ತಾಲ್ಲೂಕು ಮಟ್ಟದ ಲೋಕ ಶಿಕ್ಷಣ ಸಮಿತಿಯಲ್ಲಿ ನಮೂದಿಸಿರುವ ಕ್ಷೇತ್ರಾಭಿವೃದ್ಧಿ ಆಧಿಕಾರಿ ಎಂಬುದರ

**ಬದಲಾಗಿ**

ತಾಲ್ಲೂಕು ಸರ್ಕಾರಿ ಸಂಯೋಜಕರು ಎಂದು

ಮತ್ತು ಗ್ರಾಮ ಮಟ್ಟದ ಲೋಕ ಶಿಕ್ಷಣ ಸಮಿತಿಯಲ್ಲಿ ನಮೂದಿಸಿರುವ ಶಿಕ್ಷಣ ಸ್ಥಾಯಿ ಸಮಿತಿಯ ಸದಸ್ಯರು ಎಂಬುದಕ್ಕೆ

**ಬದಲಾಗಿ**

ಗ್ರಾಮ ಪಂಚಾಯಿತಿ ಕಾರ್ಯದರ್ಶಿ ಸದಸ್ಯರಾಗಿರುತ್ತಾರೆ.

**ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು.**

ಉಳಿದ ಅಂಶಗಳು ಯಥಾವತ್ತಾಗಿ ಮುಂದುವರಿಯುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಎಫ್. ಮಾಗಿ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಪಿ.ಆರ್. 907

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಯೋಜನೆ)

**ಕಂದಾಯ ಸಚಿವಾಲಯ**

ಸಂಖ್ಯೆ : ಕಂಇ 92 ಎಲ್ಆರ್ಎಂ 2009 ಬೆಂಗಳೂರು, ದಿನಾಂಕ : 22ನೇ ಮಾರ್ಚಿ 2010

**ಅಧಿಸೂಚನೆ**

ದಕ್ಷಿಣ ಭಾರತ ಜೈನ ಸಭಾ ಸಾಂಗಲಿ ಮಹಾರಾಷ್ಟ್ರ ಇವರಿಗೆ ಚಿಕ್ಕೋಡಿ ತಾಲ್ಲೂಕಿನ ಗವಾಣ ಗ್ರಾಮದ ಸರ್ವೆ ನಂ.65/5, ರಲ್ಲಿ 5 ಎಕರೆ 4 ಗುಂಟೆ ಜಮೀನನ್ನು ಧಾರ್ಮಿಕ ಉದ್ದೇಶಕ್ಕಾಗಿ ಖರೀದಿಸಲು ಕೋರಿ ನಮೂನೆ 15–ಎ ಮತ್ತು ನಮೂನೆ 15–ಎಎ, ರಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿ, ಬೆಳಗಾವಿ ಜಿಲ್ಲೆ, ಇವರ ಪತ್ರ ಸಂಖ್ಯೆ : ಕಂಶಾ: ಕೆಎಲ್ಆರ್:ಕಲಂ. 109ಸಿಆರ್:5/2009–10 ದಿನಾಂಕ : 14–10–2009 ರಲ್ಲಿ ಪ್ರಸ್ತಾಪಿತ ಮೇಲ್ಕಂಡ ಜಮೀನನ್ನು ಖರೀದಿಸಲು ಕರ್ನಾಟಕ ಭೂ ಸುಧಾರಣೆ ಅಧಿನಿಯಮ, 1961ರ ಕಲಂ 109 (iii) ರಡಿ ಅನುಮೋದನೆ/ವಿನಾಯಿತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾಪಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿರ್ಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109–(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63,79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ದಕ್ಷಿಣ ಭಾರತ ಜೈನ ಸಭಾ ಸಾಂಗಲಿ ಮಹಾರಾಷ್ಟ್ರ ಇವರಿಗೆ ಚಿಕ್ಕೋಡಿ ತಾಲ್ಲೂಕಿನ ಗವಾಣ ಗ್ರಾಮದ ಸರ್ವೆ ನಂ. 65/5, ರಲ್ಲಿ 5 ಎಕರೆ 4 ಗುಂಟೆ ಜಮೀನನ್ನು ಧಾರ್ಮಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕಾರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ

51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.

3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನಾರಾಯಣಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ)

ಪಿ.ಆರ್. 908

## PUBLIC WORKS, PORTS & INLAND WATER TRANSPORT SECRETARIAT

**Sub :** 1) Improvements to Dharwad-Alnavar-Ramanagar Road (SH-34) for a length of 60.40km on BOT-VGF (Toll) basis.

2) Improvements to State Highway (SH-10) from Maharastra Border to Andhra Pradesh Border via Aland, Gulbarga, Malkhed, Sedam, Ribbanapally (Whagdhari-Ribbanpally road) in Gulbarga District for a length of 141.20 kms on BOT-VGF (Toll)basis.

**Read :** Karnataka Road Development Corporation Ltd., letter No. KRDCL/MD/DAR-Road-VGF/2009-10/2048 dated 02-12-2010.

**Preamble:**

1. The proposals for the above works were submitted to Government of India through Infrastructure Development Department (IDD) on 28-07-2009.
2. In the $18^{th}$ Meeting of Empowered Institution for the scheme for financial support to Public Private Partnership (PPP) in Infrastructure (Viability Gap funding Scheme) chaired by the Additional Secretary, Economic Affairs, Government of India) held on 02-07-2009, considered the above proposals for approval of enhancement of Project cost (restricting to 23%) for Rs. 237.60 crore and Rs. 242.75 crore respectively, and directed to invite tenders.

3. Accordingly, Managing Director, Karnataka Road Development Corporation Ltd., (KRDCL) invited tenders for enhanced project costs and last date for submission of bids was 05-10-2009. Tenders were invited through e-procurement portal.
4. The technical bids were opened on 08-10-2009 and financial bids on 30-10-2009. When bids were opened it was found that the consortium of M/s GVR Infra Projects Limited along with M/s RMN Infrastructures Limited and M/s Prathyiusha Associates Shipping Pvt. Ltd., had submitted the bid.
5. The financial bids were placed before the 83rd Meeting of Technical Subcommittee of KRDCL held on 13-11-2009. The Technical Committee resolved to approve the proposals subject to the condition of conducting negotiations with the agency and final agreed amount shall be placed before the subsequent Board of Directors Meeting.
6. As per the directions of Technical Committee, negotiations were held with the agency on 17-11-2009. During the negotiations, the agency has been asked to offer reduction in VGF amount/percentage keeping in view the total project cost excluding utility shifting, contingencies etc., Accordingly the agency submitted revised VGF offer after negotiation as below:

(Rs. In crore)

| Sl. No. | Name of the Project | Over all TPC | TPC excluding utility, Cont. & financing | VGF Excluding utility, Cont. & financing (40%) | VGF offered by Agency with NPV 10% per annum | |
|---|---|---|---|---|---|---|
| | | | | | Amount | Percent |
| 1. | Dharwad- Ramanagar Road | 237.60 | 230.29 | 92.11 | 82.90 | 36.00% |
| 2. | Whagdhari-Ribbanapally Road | 242.75 | 238.58 | 95.43 | 90.66 | 38.00 |

7. The proposals of BOT – VGF (Toll) works started during the financial year 2006-07 and could not materialize till today, even the maintenance/resurfacing of these roads are not done due to the fact that the VGF proposals will be implemented at the earliest.

The above proposal is examined in detail and hence the following Order.

**Government Order No. PWD 64 EAP 2009, Bangalore, Dated 3Rd April, 2010**

The Government is pleased to approve the negotiated tender of the Consortium M/s GVR Infra Projects Limited along with M/s RMN Infrastructures Limited and M/s Prathyusha Associates Shipping Pvt. Ltd., for the following VGF works.

i. Improvements to Dharwad-Alnavar-Ramanagar Road (SH-4) for length of 60.40 km on BOT – VGF (Toll) basis – VGF price bid amounting to Rs. 82.90 crore (Rupees Eighty Two crore & Ninety lakh only) (36%) with NPV of 10% (Out of 36% VGF, the GOI shall bear 20% and the State Government shall bear 16%)

ii. Improvements to State Highway (SH-10) from Maharastra Border to Andhra Pradesh Border via Aland, Gulbarga, Malkhed, Sedam, Ribbanapally Whagdhari-Ribbanapally road) in Gulbarga District for a length of 141.20 kms on BOT – VGF (Toll) basis –VGF price bid amounting to Rs. 90.66 crore (Rupees Ninety crore and Sixty six lakh only) (38%) with

